


# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಫೆಬ್ರವರಿ ೨೭, ೨೦೧೪ (ಫಾಲ್ಗುಣ ೮, ಶಕ ವರ್ಷ ೧೯೩೫)<br>Bangalore, Thursday, February 27, 2014 (Phalguna 8, Shaka Varsha 1935) | ಸಂಚಿಕೆ ೯<br>Issue 9 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ:ಹೆಚ್‌ಡಿ 04 ಪಿಓಪಿ 2013, ಬೆಂಗಳೂರು, ದಿನಾಂಕ:16–01–2014**

ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 04 ಪಿಓಪಿ 2013 ದಿನಾಂಕ:12–02–2013ರ ಆದೇಶ ಭಾಗ ಹಾಗೂ ಅನುಬಂಧದಲ್ಲಿನ ಕೆಲವು ವಾಕ್ಯಗಳನ್ನು ಈ ಕೆಳಕಂಡಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ಆದೇಶ ಸಂಖ್ಯೆ: ಹೆಚ್‌ಡಿ 04 ಪಿಓಪಿ 2013 ದಿನಾಂಕ:12–02–2013ರಲ್ಲಿರುವುದು. | ತಿದ್ದುಪಡಿ ಮಾಡಿರುವುದು. |
|---|---|---|
| 1 | ಸದರಿ ಆದೇಶದ ಪ್ಯಾರಾ–2ರ ಕೊನೆಸಾಲಿನಲ್ಲಿರುವ **"ಕ್ರಿಮಿನಲ್ ಇನ್‌ವೆಸ್ಟಿಗೇಷನ್ ಯೂನಿಟ್"** ಎಂಬುದರ ಬದಲು: | **"ಕ್ರಿಮಿನಲ್ ಇಂಟಲಿಜೆನ್ಸ್ ಯೂನಿಟ್"** ಎಂಬುದಾಗಿ |
| 2 | ಸದರಿ ಆದೇಶದ ಅನುಬಂಧ–1ರ ಚಾರ್ಟ್‌ನಲ್ಲಿರುವ SP Administration IPS Cadre Post ನ ಅಡಿಯಲ್ಲಿ ಬರುವ "Crime Intelligence Unit" ಎಂಬುದರ ಬದಲು: | **"Criminal Intelligence Unit"** ಎಂಬುದಾಗಿ |
| 3 | ಸದರಿ ಆದೇಶದ ಅನುಬಂಧ–2ರ ಭಾಗ–1ರ ಅಂಶ–2ರ ಮೊದಲನೇ ಸಾಲಿನಲ್ಲಿನ **"ಕಾರ್ಯೋನ್ಮುಖ ಅಪರಾಧಗಳ ಕುರಿತು ಮಾಹಿತಿ ಸಂಗ್ರಹಿಸಿ"** ಎಂಬುದರ ಬದಲು: | **"ಅಪರಾಧಕ್ಕೆ ಸಂಬಂಧಪಟ್ಟಂತೆ ಕ್ರಮ ಜರುಗಿಸಬಹುದಾದ ಗುಪ್ತ ಮಾಹಿತಿ ಸಂಗ್ರಹಿಸಿ"** ಎಂಬುದಾಗಿ |
| 4 | ಸದರಿ ಆದೇಶದ ಅನುಬಂಧ–2 ಭಾಗ–2ರ ಅಂಶ–4ರ ಶೀರ್ಷಿಕೆ **"ಆಯುಧ ಮತ್ತು ಮಾದಕ ವಸ್ತು ನಿಷೇಧ ವಿಭಾಗ"** (Arms and Narcotics Division) ಎಂಬುದರ ಬದಲು: | **"ಖೋಟಾ, ಆಯುಧ ಮತ್ತು ಮಾದಕ ವಸ್ತು ನಿಷೇಧ ವಿಭಾಗ"** ಎಂಬುದಾಗಿ (Counterfeit, Arms & Narcotics Division) |
| 5 | ಸದರಿ ಆದೇಶದ ಅನುಬಂಧ–3ರ ಶೀರ್ಷಿಕೆ ಭಾಗ–1ರ **"ಕ್ರಿಮಿನಲ್ ಇನ್ವೆಸ್ಟಿಗೇಷನ್ ಯೂನಿಟ್‌ನ ಕಾರ್ಯಕಾರಿ ಸಿಬ್ಬಂದಿ ಬಲ"** ಎಂಬುದರ ಬದಲು: | **"ಕ್ರಿಮಿನಲ್ ಇಂಟಲಿಜೆನ್ಸ್ ಯೂನಿಟ್‌ನ ಕಾರ್ಯಕಾರಿ ಸಿಬ್ಬಂದಿ ಬಲ"** ಎಂಬುದಾಗಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್.ಪುಟ್ಟೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**P.R: 88**

**S.C: 200**

## ಕಂದಾಯ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಕದ್ರಿ ಗ್ರಾಮದ ಟಿ.ಎಸ್.ನಂ.339/ಎ1/ಬಿ2ಬಿ ರಲ್ಲಿ 0–09 ಎಕರೆ ಜಮೀನನ್ನು ಪ್ರಿಯದರ್ಶಿನಿ ಚಾರಿಟಬಲ್ ಟ್ರಸ್ಟ್ (ರಿ) ಇವರಿಗೆ ಗುತ್ತಿಗೆ ಆಧಾರದ ಮೇಲೆ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಪತ್ರಸಂಖ್ಯೆ: ಎಲ್‌ಎನ್‌ಡಿ(1)ಪಿಡಿಆರ್/153/2012–13 (ಬಿ2)ಸಿ.ನಂ.81530 ದಿನಾಂಕ:28–03–2013 ಮತ್ತು 08–10–2013.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇವರು ಮೇಲೆ ಓದಲಾದ ದಿನಾಂಕ: 28–03–2013 ಮತ್ತು 08–10–2013ರ ಪತ್ರಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು, ಕದ್ರಿ ಗ್ರಾಮದ ಟಿ.ಎಸ್.ನಂ. 339/ಎ1/ಬಿ2ಬಿ ರಲ್ಲಿ 0–09 ಎಕರೆ ಜಮೀನನ್ನು ಪ್ರಿಯದರ್ಶಿನಿ ಚಾರಿಟಬಲ್ ಟ್ರಸ್ಟ್, ಮಂಗಳೂರು ಇವರಿಗೆ ಮಾರುಕಟ್ಟೆ ದರ ವಿಧಿಸಿ ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

2. ಜಿಲ್ಲಾಧಿಕಾರಿಗಳ ವರದಿಯನ್ವಯ ಶಿಫಾರಸ್ಸು ಮಾಡಿರುವಂತೆ ಪ್ರಿಯದರ್ಶಿನಿ ಚಾರಿಟಬಲ್ ಟ್ರಸ್ಟ್‌ಗೆ ಮಂಜೂರು ಮಾಡಬಹುದಾದ 0–09 ಎಕರೆ ಜಮೀನು ಪೊರಂಬೋಕು ಜಮೀನು ಆಗಿದ್ದು, ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡು ಖಾಲಿ ಇದ್ದು, ಜಮೀನಿನಲ್ಲಿ ಯಾವುದೇ ಅತಿಕ್ರಮಣ ಇರುವುದಿಲ್ಲ. ಈ ಸರ್ವೆ ನಂಬರ್‌ನಲ್ಲಿ 0–69 ಎಕರೆ ಪೊರಂಬೋಕು ಜಮೀನು ಇದ್ದು, ಈ ಪೈಕಿ 0–60 ಎಕರೆ ಜಮೀನನ್ನು ಈಗಾಗಲೇ ಮಂಗಳೂರು ಮಹಾನಗರ ಪಾಲಿಕೆಯು ಉಪಯೋಗಿಸಿಕೊಂಡಿರುತ್ತದೆ. ಪ್ರಸ್ತಾಪಿತ ಪ್ರದೇಶದಲ್ಲಿ ಮಂಗಳೂರು ಮಹಾನಗರ ಪಾಲಿಕೆಗೆ ಸೇರಿದ ತರಕಾರಿ ಮತ್ತು ಮಾಂಸದ ಮಾರುಕಟ್ಟೆ ಇದ್ದು, ವಿವಿಧ ಉದ್ದೇಶಕ್ಕೆ ಬಳಕೆಯಾಗಿರುತ್ತದೆ.

3. ಕರ್ನಾಟಕ ಭೂ ಕಂದಾಯ ನಿಯಮಗಳು 1969ರ ನಿಯಮ 27ರ ಮೇರೆಗೆ ವಿಶೇಷ ಪ್ರಕರಣವೆಂದು ಪರಿಗಣಿಸಿ 0.09 ಎಕರೆಯನ್ನು ಪೊರಂಬೋಕು ಶೀರ್ಷಿಕೆಯಿಂದ ವಿರಹಿತಪಡಿಸಿ ಮಾರುಕಟ್ಟೆ ದರ ವಿಧಿಸಿ ಮಂಜೂರು ಮಾಡಲು ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಕಂಇ 84 ಎಲ್‌ಜಿಎ 2013 ಬೆಂಗಳೂರು, ದಿನಾಂಕ: 08–01–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು, ಕದ್ರಿ ಗ್ರಾಮದ ಟಿ.ಎಸ್.ನಂ. 339/ಎ1/ಬಿ2ಬಿ ರಲ್ಲಿ 0–09 ಎಕರೆ ಜಮೀನನ್ನು ಪ್ರಿಯದರ್ಶಿನಿ ಚಾರಿಟಬಲ್ ಟ್ರಸ್ಟ್, ಮಂಗಳೂರು ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳ 1969ರ ನಿಯಮ 19ರಲ್ಲಿನ ಅಧಿಕಾರವನ್ನು ಚಲಾಯಿಸಿ, ಗುತ್ತಿಗೆ ಆಧಾರದ ಮೇಲೆ 30 ವರ್ಷಗಳವರೆಗೆ ಮಾರುಕಟ್ಟೆ ದರದ ಶೇಕಡಾ 10 ರಷ್ಟು ವಿಧಿಸಿ, ಪ್ರತಿ ಐದು ವರ್ಷಗಳಿಗೊಮ್ಮೆ ಶೇಕಡಾ 10 ರಷ್ಟನ್ನು ಹೆಚ್ಚಿಸುವ ಹಾಗೂ ಪೊರಂಬೋಕು ಶೀರ್ಷಿಕೆಯಿಂದ ಪ್ರಸ್ತಾಪಿತ ಜಮೀನನ್ನು ವಿರಹಿತಪಡಿಸುವ ಷರತ್ತಿಗೊಳಪಟ್ಟು ಈ ಕೆಳಕಂಡ ನಿಬಂಧನೆಗಳನುಸಾರ ಮಂಜೂರು ಮಾಡಿದೆ.

1) ಮಂಜೂರಾತಿ ಆದೇಶದಲ್ಲಿ ಪ್ರಸ್ತಾಪಿತ ಭೂಮಿಯ ಪ್ರಚಲಿತ ಮಾರುಕಟ್ಟೆ ದರ/ಮಾರ್ಗಸೂಚಿ ದರವನ್ನು ಕಡ್ಡಾವಾಗಿ ನಮೂದಿತಕ್ಕದ್ದು.
2) ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.
3) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
4) ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
5) ಮಂಜೂರು ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
6) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
7) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
8) ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
9) ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
10) ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
11) ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

12) ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಿವಪ್ರಕಾಶ**

ಪೀಠಾಧಿಕಾರಿ (ಪ್ರ),

ಕಂದಾಯ ಇಲಾಖೆ (ಭೂ ಮಂಜೂರಾತಿ-2)

PR-124

SC -35

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆರ್‌ಡಿ 1 ಎಲ್‌ಜಿಬಿ 2013 ಬೆಂಗಳೂರು, ದಿನಾಂಕ: 23-12-2013**

ಸರಕಾರಿ ಆದೇಶ ಸಂಖ್ಯೆ: ಆರ್‌ಡಿ 1 ಎಲ್‌ಜಿಬಿ 2013 ದಿನಾಂಕ: 21-11-2013 ರಂದು ಹೊರಡಿಸಿರುವ ಆದೇಶದ ಷರತ್ತಿನ ಕ್ರಮಸಂಖ್ಯೆ (1) ರಲ್ಲಿ **'ಮಂಜೂರಾದ ಜಮೀನಿನ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ.10ರಂತೆ ಹೆಚ್ಚಿಸುವ ಹಾಗು ನಿಯಮಾನುಸಾರ ಇತರೆ ಶುಲ್ಕಗಳನ್ನು ಪಾವತಿಸತಕ್ಕದ್ದು'** ಎಂಬುದಕ್ಕೆ ಬದಲಾಗಿ **'ಮಂಜೂರಾದ ಜಮೀನಿನ ಗುತ್ತಿಗೆ ದರವನ್ನು ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಶೇ.5 ರಂತೆ ಹೆಚ್ಚಳ ಮಾಡಲು ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ಪಾವತಿಸತಕ್ಕದ್ದು'** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ-1)

PR-125

SC -100

## ಶಿಕ್ಷಣ ಸಚಿವಾಲಯ

**ವಿಷಯ:** ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶದ ಮತ್ತು ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದದ ಅನುಷ್ಠಾನದ ಮೇಲ್ವಿಚಾರಣೆ ನಡೆಸಲು ಏಕ ಸದಸ್ಯ ನಿಯಂತ್ರಣಾ ಸಮಿತಿಯ ಸದಸ್ಯರ ಷರತ್ತು ಮತ್ತು ನಿಬಂಧನೆಗಳ ಬಗ್ಗೆ

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ:ಇಡಿ 111 ಟಿಇಸಿ 2013, ದಿನಾಂಕ: 29-07-2013.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶ ಮತ್ತು ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದದ ಅನುಷ್ಠಾನದ ಮೇಲ್ವಿಚಾರಣೆ ನಡೆಸಲು ಡಾ॥ ಎಸ್.ಕೆ.ಸೈದಾಪುರ್, ನಿವೃತ್ತ ಉಪ ಕುಲಪತಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡರವರನ್ನು 'ಏಕ ಸದಸ್ಯ ನಿಯಂತ್ರಣ ಸಮಿತಿಯ' ಸದಸ್ಯರನ್ನಾಗಿ ದಿನಾಂಕ: 29-07-2013ರಂದು ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ. ಸದರಿ ಸಮಿತಿಯ ಸದಸ್ಯರಿಗೆ ನೀಡಬಹುದಾದ ಸವಲತ್ತುಗಳಿಗೆ ಸಂಬಂಧಪಟ್ಟಂತೆ ಷರತ್ತು ಮತ್ತು ನಿಬಂಧನೆಗಳನ್ನು ಈ ಹಿಂದೆ ಹೊರಡಿಸಲಾದ ಆದೇಶದಲ್ಲಿ ಪ್ರತ್ಯೇಕವಾಗಿ ಹೊರಡಿಸಲಾಗುವುದೆಂದು ಆದೇಶಿಸಿರುವ ಹಿನ್ನೆಲೆ ಈ ಕೆಳಕಂಡಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 111 ಟಿಇಸಿ 2013 ಬೆಂಗಳೂರು, ದಿನಾಂಕ: 8ನೇ ಜನವರಿ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಡಾ॥ ಎಸ್.ಕೆ. ಸೈದಾಪುರ, ನಿವೃತ್ತ ಕುಲಪತಿಗಳು ಹಾಗೂ ಹಾಲಿ ಏಕ ಸದಸ್ಯ ಸಮಿತಿಯ ಸದಸ್ಯರು ಇವರಿಗೆ ದಿನಾಂಕ: 01-08-2013ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ವಿಶ್ವವಿದ್ಯಾನಿಲಯದಲ್ಲಿ ಸೇವೆಯಲ್ಲಿರುವ ಉಪ ಕುಲಪತಿಗಳು ಪಡೆಯುತ್ತಿರುವ ವೇತನ ಹಾಗೂ ಇನ್ನಿತರೆ ಭತ್ಯೆಗಳನ್ನು (ಪಿಂಚಣಿ ಕಳೆದು) ಸಂಭಾವನೆಯೆಂದಾಗಿ ನೀಡಲು ಆದೇಶಿಸಿದೆ. ಮುಂದುವರೆದು ಸದರಿಯವರು ಉಪಕುಲಪತಿಗಳ ವೇತನದ ಮೇಲೆ ತುಟ್ಟಿಭತ್ಯೆಗೆ ಅರ್ಹರಿದ್ದು, ಪಿಂಚಣಿಯ ಮೇಲೆ ತುಟ್ಟಿಭತ್ಯೆಗೆ ಲಭ್ಯವಿರುವುದಿಲ್ಲ.

ಸದರಿ ಸಂಭಾವನೆಯನ್ನು ಶ್ರೀಯುತರು ಸದರಿ ಸಮಿತಿಯಲ್ಲಿ ಕಾರ್ಯನಿರ್ವಹಿಸುವ ಅವಧಿಗೆ ಸಿಇಟಿ ಘಟಕದ ನಿಧಿಯಿಂದಲೇ ಭರಿಸುವಂತೆ ಹಾಗೂ ಇದಕ್ಕಾಗಿ ಸರ್ಕಾರದಿಂದ ಯಾವುದೇ ಅನುದಾನವನ್ನು ಕೋರುವಂತಿಲ್ಲ ಎಂಬ ಷರತ್ತಿನೊಂದಿಗೆ ಮಂಜೂರಾತಿ ನೀಡಿದೆ.

ಆದೇಶವನ್ನು ಆರ್ಥಿಕ ಇಲಾಖೆಯ ಸಂಖ್ಯೆ: ಆಇ 907 ವೆಚ್ಚ-8/2013, ದಿನಾಂಕ: 26-12-2013ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ನಾಗಭೂಷಣ್**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

PR-127

SC -100

## ಕಂದಾಯ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಕಂಇ 18 ಭೂದಾಸ 2013 ಬೆಂಗಳೂರು, ದಿನಾಂಕ:17-01-2014**

**ವಿಷಯ:** ನಗರಮಾಪನಕ್ಕೆ ಸಂಬಂಧಪಟ್ಟಂತೆ ಹಾಲಿ ಚಾಲ್ತಿಯಲ್ಲಿರುವ ಯುಪಿಓಆರ್ ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಗುತ್ತಿರುವ ಪಿ.ಆರ್.ಕಾರ್ಡ್ ದಾಖಲೆಯೊಂದಿಗೆ ಸಾರ್ವಜನಿಕರಿಗೆ ವಿತರಿಸಲು ಸಾರಾಂಶ ಹೊಂದಿರುವ ಪಿ.ಆರ್.ಕಾರ್ಡ್‌ನ್ನು ಸಹ ಸಿದ್ಧಪಡಿಸಿ ವಿತರಿಸುವ ಬಗ್ಗೆ.

ಅಧಿಸೂಚನೆ ಸಂಖ್ಯೆ: ಕಂಇ 18 ಭೂದಾಸ 2013 ದಿನಾಂಕ: 30–08–2013ರ ಅಧಿಸೂಚನೆ ದಿನಾಂಕ:07–11–2013ರ ರಾಜ್ಯಪತ್ರದಲ್ಲಿ ಪ್ರಕಟಣೆಯಾಗಿದ್ದು, ಇದರಲ್ಲಿ ಪಿ.ಆರ್.ಕಾರ್ಡ್ ನಮೂನೆ ಪ್ರಕಟಿಸಿರುವುದಿಲ್ಲ. ಆದುದರಿಂದ ಸಾರಾಂಶ ಹೊಂದಿರುವ ಪಿ.ಆರ್.ಕಾರ್ಡ್‌ನ್ನು ಆಂಗ್ಲ ಮತ್ತು ಕನ್ನಡ ಭಾಷೆಯಲ್ಲಿ ಒದಗಿಸುವ ಸಲುವಾಗಿ ಪ್ರತ್ಯೇಕ ನಮೂನೆಗಳನ್ನು ಈ ಮೂಲಕ ಪ್ರಕಟಿಸಲಾಗಿದೆ.

ಈ ನಮೂನೆಗಳು ಬಗ್ಗೆ ಯಾವುದೇ ಆಕ್ಷೇಪಣೆಗಳಿದ್ದಲ್ಲಿ ಇವುಗಳು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ 15 ದಿನದೊಳಗೆ ಸರ್ಕಾರದ ಕಾರ್ಯದರ್ಶಿಗಳು (ಭೂಮಿ ಮತ್ತು ಯು.ಪಿ.ಓ.ಆರ್.) ಕಂದಾಯ ಇಲಾಖೆ ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿದೆ.

GOVERNMENT OF KARNATAKA
ಕರ್ನಾಟಕ ಸರ್ಕಾರ

ನಗರ :
ವಾರ್ಡ್ ಸಂಖ್ಯೆ :
ವಾರ್ಡ್ ಹೆಸರು :

ಯುಪಿಓಆರ್ ಸಂಖ್ಯೆ :

REVENUE DEPARTMENT
ಕಂದಾಯ ಇಲಾಖೆ

URBAN PROPERTY OWNERSHIP RECORD

## ನಗರ ಆಸ್ತಿ ಮಾಲೀಕತ್ವದ ದಾಖಲೆ ( ಸಂಕ್ಷಿಪ್ತ)

ಆಸ್ತಿ ಮಾಲೀಕತ್ವದ ದಾಖಲೆಯನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966 ರ ನಿಯಮ 83(2) , ಅಧ್ಯಾಯ XII ರ ಮೇರೆಗೆ ವಿತರಿಸಲಾಗಿದೆ

| | | | | |
|---|---|---|---|---|
| 1. | ಆಸ್ತಿ ವಿವರಗಳು | ಆಸ್ತಿಯ ಸ್ವರೂಪ : | ಮ್ಯುಟೇಷನ್ ಸಂಖ್ಯೆ: | ಆಸ್ತಿಯ/ಅಪಾರ್ಟ್ ಮೆಂಟ್ ನ ವಿಸ್ತೀರ್ಣ: ……… ಚದರ ಮೀಟರ್ |
| 2. | ಮಾಲೀಕತ್ವದ ವಿವರಗಳು | ಮಾಲೀಕರ ಹೆಸರು : | ಗುರುತು ಪತ್ರದ ಸಂಖ್ಯೆ:<br>ಯುಐಡಿ ಸಂಖ್ಯೆ: | |
| | | ದಸ್ತಾವೇಜಿನ ತರಹ: | ದಸ್ತಾವೇಜಿನ ಸಂಖ್ಯೆ: | ನೋಂದಣಿ ದಿನಾಂಕ: |
| 3. | ಗುತ್ತಿಗೆ ವಿವರಗಳು | ಗುತ್ತಿಗೆದಾರರ ಹೆಸರು: | ಗುತ್ತಿಗೆ ಅವಧಿ | |
| | | | ಇಂದ: | ವರೆಗೆ : |
| 4. | ಭದ್ರತೆ/ ಋಣಭಾರ ವಿವರಗಳು | ಬ್ಯಾಂಕಿನ ಹೆಸರು: | ಮೊತ್ತ : | ಅವಧಿ: |
| 5. | ಅನುಭೋಗದ ಹಕ್ಕುಗಳು | | | |
| 6. | ಷರಾ | | | |

ನಕ್ಷೆ

ಯುಪಿಓಆರ್ ಸಂಖ್ಯೆ
ಮೀಟರ್
ಯುಪಿಓಆರ್ ಸಂಖ್ಯೆ
ಮೀಟರ್
ಮೀಟರ್
ಯುಪಿಓಆರ್ ಸಂಖ್ಯೆ
ಯುಪಿಓಆರ್ ಸಂಖ್ಯೆ
ಮೀಟರ್
ರಸ್ತೆಯ ಹೆಸರು
ಸ್ಕೇಲ್ = 1 ಮೀ

ಷರಾ : 1. ಇದು ಡಿಜಿಟಲ್ ಸಹಿಯಾದ ದಾಖಲೆ, ಸಹಿಯ ಅವಶ್ಯಕತೆ ಇರುವುದಿಲ್ಲ . 2. ಬಾರ್ ಕೋಡಿನಲ್ಲಿ ಡಿಜಿಟಲ್ ಸಹಿ ಇರುವುದರಿಂದ ವಿರೂಪಗೊಳಿಸಬಾರದು.
3. ಕೋರಿಕೆ ಮೇರೆಗೆ ಈ ದಾಖಲೆಯನ್ನು ಆಂಗ್ಲ ಭಾಷೆಯಲ್ಲಿ ಒದಗಿಸಲಾಗುವುದು.

ಮುದ್ರಣ ದಿನಾಂಕ : ……………………

GOVERNMENT OF KARNATAKA

ಕರ್ನಾಟಕ ಸರ್ಕಾರ

Town

Ward No:

Ward Name:

UPOR Number :

REVENUE DEPARTMENT

ಕಂದಾಯ ಇಲಾಖೆ

URBAN PROPERTY OWNERSHIP RECORD

## URBAN PROPERTY OWNERSHIP RECORD (Summary)

PROPERTY OWNERSHIP CERTIFICATE ISSUED PURSUANT TO RULE 83(2) OF CHAPTER XII OF THE KARNATAKA LAND REVENUE RULES 1966

| | | | | |
|---|---|---|---|---|
| 1. | Property Details | Property Type : | Mutation Number: | PLOT/FLAT Area: Sq.mtrs |
| 2. | Ownership Details | Owner Name : | | Identification Certificate No: UID No: |
| | | Document Type: | Document Number: | Date of Registration: |
| 3. | Lease Details | Name of Lessee: | Lease Period | |
| | | | From: | To : |
| 4. | Security/Encumbrance Details | Bank Name: | Amount: | Duration: |
| 5. | Easement Rights | | | |
| 6. | Remarks | | | |

MAP

UPOR Number

Meters

Metres

UPOR Number

Metres

UPOR Number

UPOR Number

Meters

Road Name

1 Cm = 1 Mtr

Remarks : 1. This is digitally signed document does not need manual signature. 2. Barcode contains the digital information, don't damage it.

Date of Printing: .......................

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಂಭುಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಮಾಪನ)

PR-126

SC -100

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ವಿವಿಧ ರಾಜ್ಯಗಳಿಂದ ಕ್ರೋಢೀಕರಿಸಿದ ಔಷಧಗಳನ್ನು ಔಷಧ ಪರೀಕ್ಷಾ ಪ್ರಯೋಗಾಲಯ ಇಲ್ಲಿ ವಿಶ್ಲೇಷಣೆ ಮಾಡುವ ಬಗ್ಗೆ.

**ಓದಲಾಗಿದೆ :** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಔನಿಇ/35/ಅ.ವಿ–4/2013–14, ದಿನಾಂಕ : 10–12–2013.

**ಪ್ರಸ್ತಾವನೆ :**

ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 10–12–2013ರ ಪತ್ರದಲ್ಲಿ ಎನ್.ಐ.ಬಿ. ನೊಯ್ಡಾ, ಇವರ ದಿನಾಂಕ : 29–11–2013ರ ಪತ್ರದಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯವು ವಿಶ್ವ ಆರೋಗ್ಯ ಸಂಸ್ಥೆಯ ಸಹಯೋಗದೊಂದಿಗೆ ಭಾರತ ದೇಶದಲ್ಲಿ ತಯಾರಿಸಿ ಮಾರಾಟ ಮಾಡುತ್ತಿರುವ ಹಾಗೂ ರಫ್ತು ಮಾಡಲಾಗುವ ಔಷಧಗಳ ಗುಣಮಟ್ಟದ ಬಗ್ಗೆ ರಾಷ್ಟ್ರೀಯ ಮಟ್ಟದಲ್ಲಿ ಸಮೀಕ್ಷೆ ಮಾಡಬೇಕಾಗಿದ್ದು ದೇಶದ ವಿವಿಧ ಭಾಗಗಳಿಂದ ಪಡೆದ ಔಷಧಗಳನ್ನು ವಿಶ್ಲೇಷಣೆ ಮಾಡಲು ಉದ್ದೇಶಿಸಿರುವುದರಿಂದ ಕರ್ನಾಟಕ ರಾಜ್ಯದ ಔಷಧ ಪರೀಕ್ಷಾ ಪ್ರಯೋಗಾಲಯದಲ್ಲಿಯೂ ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಾವಳಿಗಳ ಷೆಡ್ಯೂಲ್ ಬಿ ಪ್ರಕಾರ ನಿಗದಿ ಪಡಿಸಿದ ಶುಲ್ಕದಂತೆ ಔಷಧಗಳನ್ನು ವಿಶ್ಲೇಷಣೆ ಮಾಡುವ ಬಗ್ಗೆ ಸಮ್ಮತಿಯನ್ನು ಕೋರಿರುವರು ಬೆಂಗಳೂರಿನ ಔಷಧ ಪರೀಕ್ಷಾ ಪ್ರಯೋಗಾಲಯವು ಎಲ್ಲಾ ರೀತಿಯ ಅತ್ಯಾಧುನಿಕ ಉಪಕರಣಗಳನ್ನು ಹೊಂದಿದ್ದು. ಎನ್.ಎ.ಬಿ.ಎಲ್. ಸಂಸ್ಥೆಯಿಂದ ಮಾನ್ಯತೆ (Accreditation) ಹೊಂದಿದ್ದು, ಸದರಿ ಪ್ರಯೋಗಾಲಯದಲ್ಲಿ 07 ವೈಜ್ಞಾನಿಕ ಅಧಿಕಾರಿಗಳು ಹಾಗೂ 50 ಕಿರಿಯ ವೈಜ್ಞಾನಿಕ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದು, ವಿಶ್ಲೇಷಣಾ ಕಾರ್ಯಗಳನ್ನು ಯಾವುದೇ ಸಮಸ್ಯೆಯಿಲ್ಲದೆ ನಡೆಸಬಹುದಾಗಿರುವುದರಿಂದ ರಾಷ್ಟ್ರೀಯ ಮಟ್ಟದ ಸಮೀಕ್ಷೆಯಲ್ಲಿ ಬರುವ ಔಷಧ ಮಾದರಿಗಳನ್ನು ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇಲ್ಲಿ ವಿಶ್ಲೇಷಿಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 273 ಐಎಂಎಂ 2013, ಬೆಂಗಳೂರು, ದಿನಾಂಕ : 19–12–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಷ್ಟ್ರೀಯ ಮಟ್ಟದ ಸಮೀಕ್ಷೆಯಲ್ಲಿ ಬರುವ ಔಷಧ ಮಾದರಿಗಳನ್ನು ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇಲ್ಲಿ ವಿಶ್ಲೇಷಿಸಲು ಸರ್ಕಾರದ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ನರಸಿಂಹರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ ಮತ್ತು ಸಮನ್ವಯ).

**PR. 53**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ಲಕ್ಕೂರು ಗ್ರಾಮದ ಸ.ನಂ. 52ರಲ್ಲಿ 5–00 ಎಕರೆ ಜಮೀನನ್ನು ಕೂಡಲಸಂಗಮ ಪಂಚಮಸಾಲಿಪೀಠ, ಹುನಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಲಿಂಗಾಯಿತ ಪಂಚಮಸಾಲಿ ಜಗದ್ಗುರು ಮಹಾಪೀಠ, ಶ್ರೀ ಕ್ಷೇತ್ರ ಕೂಡಲಸಂಗಮ ಇವರ ಮನವಿ ಪತ್ರ ದಿನಾಂಕ : 07–12–2012.
2. ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್ಎನ್‌ಡಿ (ಪಿ)/ಸಿಆರ್/105/2012–13, ದಿನಾಂಕ : 28–01–2013.
3. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರ ಪತ್ರ ಸಂಖ್ಯೆ : ಎಲ್.ಎನ್.ಡಿ/ಸಿಆರ್/251/2012–13, ದಿನಾಂಕ : 31–01–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಕೂಡಲಸಂಗಮ ಪಂಚಮಸಾಲಿಪೀಠ, ಹುನಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರು ಪೀಠದ ಶೈಕ್ಷಣಿಕ ಚಟುವಟಿಕೆಗಳಿಗಾಗಿ 10–00 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆರವರು ದಿನಾಂಕ : 28–01–2013ರ ಪತ್ರದಲ್ಲಿ ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ಲಕ್ಕೂರು ಗ್ರಾಮದ ಸ.ನಂ. 52 ರಲ್ಲಿ 10–00 ಎಕರೆ ಜಮೀನನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮುಂದುವರೆದು, ಮೇಲಿನ ಕ್ರಮ ಸಂಖ್ಯೆ (3) ರಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ಲಕ್ಕೂರು ಗ್ರಾಮದ ಸ.ನಂ. 52 ರಲ್ಲಿ 28–12 ಎಕರೆ/ಗುಂಟೆ ಜಮೀನಿದ್ದು, ಇದರಲ್ಲಿ 5–10 ಎಕರೆ/ಗುಂಟೆ ವಿಲೇಯಾಗಿದ್ದು, ಉಳಿದಂತೆ 21–02 ಎಕರೆ/ಗುಂಟೆ ಗೋಮಾಳ ಜಮೀನಿದ್ದು, ಈ ಪೈಕಿ 10–00 ಎಕರೆ ಜಮೀನನ್ನು ಕೂಡಲಸಂಗಮ ಪಂಚಮಸಾಲಿ ಪೀಠದವರಿಗೆ ಮಂಜೂರು ಮಾಡುವ ಬಗ್ಗೆ ವರದಿ ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 97 ಎಲ್‌ಜಿಬಿ 2013, ಬೆಂಗಳೂರು, ದಿನಾಂಕ : 22-11-2013**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ಲಕ್ಕೂರು ಗ್ರಾಮದ ಸ.ನಂ. 52 ರಲ್ಲಿನ 5-00 ಎಕರೆ ಜಮೀನನ್ನು ಕೂಡಲಸಂಗಮ ಪಂಚಮಸಾಲಿಪೀಠ, ಹುನಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರಿಗೆ ಕರ್ನಾಟಕ ಭೂ ಕಂದಾಯ ನಿಯಮಗಳು 1966 ನಿಯಮ 97(4)ರನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಪೀಠದ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳ 1969 ನಿಯಮ 19(1) ಮತ್ತು 19(3) ರನ್ವಯ ಪ್ರಚಲಿತ ಮಾರುಕಟ್ಟೆ ದರದ ಶೇ. 10 ರಷ್ಟು ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಸದರಿ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ. 10 ರಂತೆ ಹೆಚ್ಚಿಸುವ ಷರತ್ತಿಗೊಳಪಟ್ಟು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಷರತ್ತು ಹಾಗೂ ನಿಬಂಧನೆಗಳಿಗೊಳಪಟ್ಟು ಮಂಜೂರು ಮಾಡಿದೆ.

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
6. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
7. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
8. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
9. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ/ಇಲಾಖೆಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಸ್ಕೆಚ್‌ನಂತೆ ಸರ್ವೆ ಮಾಡಿ ಹಸ್ತಾಂತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ-1).

**PR. 59**

**SC-100**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 27 ಭೂಸ್ವಾಚ 2013, ಬೆಂಗಳೂರು, ದಿನಾಂಕ : 11-11-2013.**

ಡಾ॥ ಎಸ್. ನಾಗರಾಜ್, ಉಪವಿಭಾಗಾಧಿಕಾರಿ, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರನ್ನು ಅಧಿಸೂಚನೆ ಸಂಖ್ಯೆ : ಕಂಇ 27 ಭೂಸ್ವಾಚ 2013, ದಿನಾಂಕ : 04-09-2013ರಲ್ಲಿ ದಾವಣಗೆರೆ ಜಿಲ್ಲಾವ್ಯಾಪ್ತಿಯಲ್ಲಿ ಬರುವ, ಶಿವಮೊಗ್ಗ-ಹರಿಹರ ಮತ್ತು ತುಮಕೂರು-ದಾವಣಗೆರೆ ಈ ಎರಡು ಹೊಸ ರೈಲ್ವೆ ಬ್ರಾಡ್ ಗೇಜ್ ನಿರ್ಮಾಣ ಯೋಜನೆಯ ಕಾಮಗಾರಿಗಳ ಕರ್ತವ್ಯವನ್ನು ನಿರ್ವಹಿಸಲು ಆದೇಶಿಸಲಾಗಿದ್ದನ್ನು ಮಾರ್ಪಡಿಸಿ, "ವಿಶೇಷ ಭೂಸ್ವಾಧೀನಾಧಿಕಾರಿ" ಕೊಟ್ಟೂರು-ಹರಿಹರ ರೈಲ್ವೇ ಯೋಜನೆ ಇವರನ್ನು ದಾವಣಗೆರೆ-ತುಮಕೂರು, ಶಿವಮೊಗ್ಗ-ಹರಿಹರ ಹೊಸ ರೈಲ್ವೇ ಮಾರ್ಗಗಳ ನಿರ್ಮಾಣ ಕಾಮಗಾರಿ ಈ ಎರಡು ಯೋಜನೆಗಳ ಕರ್ತವ್ಯವನ್ನು ನಿರ್ವಹಿಸಲು, ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್. ಹಂದಿಗೋಳ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ-2).

**PR 60**

## ಕಂದಾಯ ಸಚಿವಾಲಯ

**ವಿಷಯ :** ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ಭೂಸ್ವಾಧೀನ ಪ್ರಕರಣಗಳಲ್ಲಿ ಪರಿಹಾರ ಮತ್ತಿತರೆ ವಿಚಾರಗಳನ್ನು ಪರಿಶೀಲಿಸಲು ಸರ್ಕಾರದ ಮಟ್ಟದಲ್ಲಿ ಸಮಿತಿ ರಚನೆ ಕುರಿತು.

**ಓದಲಾಗಿದೆ :**

1. ಅಧ್ಯಕ್ಷರು, ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ರಸ್ತೆ ಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯ, ನವದೆಹಲಿ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : NHAI/11013/DGM(LA/Coord)/2013, ದಿನಾಂಕ : 05-03-2013.

**ಪ್ರಸ್ತಾವನೆ :**

ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ಭೂಸ್ವಾಧೀನ ಪ್ರಕರಣಗಳಲ್ಲಿ ಪರಿಹಾರ ನೀಡುವ ವಿಷಯದ ಕುರಿತು ನ್ಯಾಯಾಲಯದಲ್ಲಿ ಪ್ರಕರಣಗಳು ದಾಖಲಾಗಿ, ಉದ್ದೇಶಿತ ಯೋಜನೆಗಳ ವಿಳಂಬಕ್ಕೆ ಕಾರಣವಾಗುತ್ತಿರುವ ಹಿನ್ನೆಲೆಯಲ್ಲಿ ಈ ಪ್ರಕರಣಗಳ ಐತೀರ್ಪು, ಪರಿಹಾರ ಮತ್ತಿತರೆ ವಿಚಾರಗಳನ್ನು ಪರಿಶೀಲಿಸಲು ಸರ್ಕಾರದ ಮಟ್ಟದಲ್ಲಿ ಸಮಿತಿ ರಚಿಸುವಂತೆ ಮೇಲೆ ಓದಲಾದ (1)ರ ದಿನಾಂಕ : 05-03-2013ರ ಪತ್ರದಂತೆ ಅಧ್ಯಕ್ಷರು, ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ರಸ್ತೆ ಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯ, ನವದೆಹಲಿ ಇವರು ಕೋರಿರುವ ಅಂಶಗಳು ಹೀಗಿರುತ್ತದೆ.

" In a large number of cases pertaining to land acquisition, the NHAI is filing appeals in the Court against the sward of CALA or the Arbitrator. I would suggest that such cases should be examined at State Government level 'before resorting to litigation. I would, therefore, request you to constitute a Committee which may be headed by Commissioner or Secretary dealing with the land revenue matter and may include one or two more officers from the State Government apart from Regional Officer of NHAI. This committee can examine the award of CALA/Arbitrator and give its recommendations based on which further action can be taken. Even the complaints of anomalies in payment of compensation, etc., can be referred to this Committee. This would save the land owners and NHAI both from unnecessary litigation on the issue."

ಅಧ್ಯಕ್ಷರು, ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ರಸ್ತೆ ಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯ, ನವದೆಹಲಿ ಇವರ ಕೋರಿಕೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 44 ಭೂಸ್ವಾವಿ 2013, ಬೆಂಗಳೂರು, ದಿನಾಂಕ : 25-09-2013**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ಯೋಜನೆಗಳಿಗೆ ಸಂಬಂಧಿಸಿದ ಭೂಸ್ವಾಧೀನ ಪ್ರಕರಣಗಳ ಐತೀರ್ಪು, ಪರಿಹಾರ ಮತ್ತಿತರೆ ವಿಚಾರಗಳನ್ನು ಪರಿಶೀಲಿಸಿ ಸೂಕ್ತ ತೀರ್ಮಾನ ತೆಗೆದುಕೊಳ್ಳುವ ಸಲುವಾಗಿ ಈ ಕೆಳಕಂಡಂತೆ ಸಮಿತಿಯನ್ನು ರಚಿಸಿದೆ.

1. ಸಂಬಂಧಪಟ್ಟ ವಿಭಾಗದ ಪ್ರಾದೇಶಿಕ ಆಯುಕ್ತರು – ಅಧ್ಯಕ್ಷರು
2. ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು – ಸದಸ್ಯರು
3. ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ಪ್ರತಿನಿಧಿ – ಸದಸ್ಯರು
4. ಸಂಬಂಧಿಸಿದ ವ್ಯಾಪ್ತಿಯ ವಿಶೇಷ ಭೂಸ್ವಾಧೀನಾಧಿಕಾರಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ – ಸದಸ್ಯ-ಕಾರ್ಯದರ್ಶಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಂಕರಗೌಡ ಸಿ. ದೊಡ್ಡಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾಧೀನ 1 ಮತ್ತು 3).

**PR. 61**
**SC-100**

## ಕಂದಾಯ ಸಚಿವಾಲಯ

**ವಿಷಯ :** ಡಾ॥ ಮನು ಬಳಿಗಾರ್ (ಎಂ.ಪಿ. ಬಳಿಗಾರ್) ನಿವೃತ್ತ ಇವರನ್ನು ಗುತ್ತಿಗೆ ಆಧಾರದ ಮೇಲೆ 2 ವರ್ಷಗಳ ಅವಧಿಗೆ ರೋರಿಕ್ ಮತ್ತು ದೇವಿಕಾರಾಣಿ ರೋರಿಕ್ ಎಸ್ಟೇಟ್ ಮಂಡಳಿ ಬೆಂಗಳೂರು ಇಲ್ಲಿಗೆ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯನ್ನಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ : ಕಂಇ 115 ಎಲ್ಆರ್ಎ 2013, ದಿನಾಂಕ : 05-06-2013.

**ಪ್ರಸ್ತಾವನೆ :**

ರೋರಿಕ್ ಮತ್ತು ದೇವಿಕಾರಾಣಿ ರೋರಿಕ್ ಎಸ್ಟೇಟ್ ಮಂಡಳಿ ಬೆಂಗಳೂರು ಇಲ್ಲಿನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯು ತೆರವಾಗಿದ್ದರಿಂದ ಆ ಹುದ್ದೆಗೆ ಮೇಲೆ ಓದಲಾದ (1)ರಲ್ಲಿ ದಿನಾಂಕ : 05-06-2013ರ ಅಧಿಸೂಚನೆಯಲ್ಲಿ ಡಾ॥ ಮನು ಬಳಿಗಾರ್ (ಎಂ.ಪಿ. ಬಳಿಗಾರ್), ನಿವೃತ್ತ ಕೆ.ಎ.ಎಸ್. (ಸೂಪರ್ ಟೈಮ್ ಸ್ಕೇಲ್) ಅಧಿಕಾರಿ ಇವರನ್ನು ಎರಡು ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಿ, ಆದೇಶಿಸಲಾಗಿತ್ತು ಹಾಗೂ ಸದರಿ ಅಧಿಕಾರಿಯ ವೇತನ, ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದೆಂದು ಸಹ ತಿಳಿಸಲಾಗಿತ್ತು.

ಅದರಂತೆ ಸದರಿ ಅಧಿಕಾರಿಯವರ ವೇತನ ನೇಮಕಾತಿ ನಿಬಂಧನೆ ಹಾಗೂ ಷರತ್ತುಗಳನ್ನು ವಿಧಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 115 ಎಲ್ಆರ್ಎ 2013, ಬೆಂಗಳೂರು, ದಿನಾಂಕ : 27-12-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಡಾ॥ ಮನು ಬಳಿಗಾರ್ (ಎಂ.ಪಿ. ಬಳಿಗಾರ್), ನಿವೃತ್ತ ಕೆ.ಎ.ಎಸ್. (ಸೂಪರ್ ಟೈಮ್ ಸ್ಕೇಲ್) ಅಧಿಕಾರಿ ಇವರ ಗುತ್ತಿಗೆ ಆಧಾರದ ಮರು ನೇಮಕಾತಿ ವೇತನವನ್ನು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, ನಿಯಮ 313(ಬಿ), ಪ್ರಕಾರ ರೂ. 23,305-00 ಗಳಿಗೆ ನಿಗದಿಪಡಿಸಲಾಗಿದೆ. ಈ ಮರುನೇಮಕಾತಿ ವೇತನದೊಂದಿಗೆ ಶ್ರೀಯುತರು ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನವಾದ 63,600-00 ಗಳಿಗೆ ನಿಯಮಾನುಸಾರ ಲಭ್ಯವಾಗುವ DA/HRA/CCA ಗಳನ್ನು ಪಡೆಯಬಹುದು. ಆದರೆ ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲ, ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತಿಲ್ಲ. ಶ್ರೀಯುತರ ನೇಮಕಾತಿಯು ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟಿರುತ್ತದೆ.

1. ಡಾ॥ ಎಂ.ಪಿ. ಬಳಿಗಾರ್ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ : 10–06–2013 ರಿಂದ ಎರಡು ವರ್ಷದ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಡಾ॥ ಎಂ.ಪಿ. ಬಳಿಗಾರ್, ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 23,305/– ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನಕ್ಕೆ ಅನುಗುಣವಾಗಿ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿ ಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ಅಧಿಕಾರಿ ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ಅಧಿಕಾರಿ ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ಸ್ ನಿಯಮ 150 ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ಅಧಿಕಾರಿ ಅರ್ಹರಾಗಿವುದಿಲ್ಲ.
6. ಸದರಿ ಅಧಿಕಾರಿ ದುರ್ವತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ಅಧಿಕಾರಿ ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರುನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟು ಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿ ಕೊಡಲು ಅವರು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50–00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಬರೆದುಕೊಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಸಂಖ್ಯೆ : ಆಇ 1026 ಸೇ–3/2013, ದಿನಾಂಕ : 20–12–2013ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಂ. ದಾಕ್ಷಾಯಣಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸುಧಾರಣೆ).

**PR. 62**
**SC-20**

## ಸಾರಿಗೆ ಸಚಿವಾಲಯ

**ವಿಷಯ :** ಸಾರಿಗೆ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾದ ಅಪರ ಸಾರಿಗೆ ಆಯುಕ್ತರ ವೃಂದಕ್ಕೆ ನೇಮಕಾತಿ ವಿಧಾನವನ್ನು ಕಾರ್ಯಕಾರಿ ಆದೇಶದ ಮೂಲಕ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಾರಿಇ 292 ಸಾಇಸೇ 2013, ದಿನಾಂಕ : 07–12–2013.
2. ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 38 ಸೇನಿಇ 96, ದಿನಾಂಕ : 01–08–1996.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 07–12–2013ರ ಸರ್ಕಾರಿ ಆದೇಶದಲ್ಲಿ ಸಾರಿಗೆ ಇಲಾಖೆಯಲ್ಲಿ ಹಾಲಿ ಇರುವ ಆರು ಜಂಟಿ ಸಾರಿಗೆ ಆಯುಕ್ತರ ಹುದ್ದೆಗಳ ಪೈಕಿ ನಾಲ್ಕು ಹುದ್ದೆಗಳನ್ನು ವೇತನ ಶ್ರೇಣಿ ರೂ. 48,900–63,600ರ ಅಪರ ಸಾರಿಗೆ ಆಯುಕ್ತರ ಹುದ್ದೆಗಳನ್ನಾಗಿ ಉನ್ನತೀಕರಿಸಿ ಆದೇಶ ಹೊರಡಿಸಲಾಗಿದೆ.

ಸದರಿ ಅಪರ ಸಾರಿಗೆ ಆಯುಕ್ತರ ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಕಾಲಾವಕಾಶ ಬೇಕಾಗಿರುವುದರಿಂದ, ಈ ಹುದ್ದೆಗಳನ್ನು ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗಧಿಪಡಿಸಿ ತುಂಬಲು ಅವಕಾಶ ಕಲ್ಪಿಸಲು ಉದ್ದೇಶಿಸಿದೆ. ಈ ಹಿನ್ನೆಲೆಯಲ್ಲಿ, ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತ ತಿದ್ದುಪಡಿ

ತರುವುದನ್ನು ಕಾಯ್ದಿರಿಸಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 01–08–1996ರ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಕಾರ್ಯಕಾರಿ ಆದೇಶ ಹೊರಡಿಸುವ ಮೂಲಕ ಮೇಲ್ಕಂಡ ಹುದ್ದೆಗಳಿಗೆ ನೇಮಕಾತಿ ವಿಧಾನವನ್ನು ಜಾರಿಗೆ ತರಲು ನಿರ್ಧರಿಸಲಾಗಿದೆ.

ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಾರಿಇ 292 ಸಾಇಸೇ 2013, ಬೆಂಗಳೂರು, ದಿನಾಂಕ : 04–01–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾರಿಗೆ ಇಲಾಖೆಯಲ್ಲಿ ಹೊಸದಾಗಿ ಉನ್ನತೀಕರಿಸುವುದರ ಮೂಲಕ ಸೃಜಿಸಲಾದ ಅಪರ ಸಾರಿಗೆ ಆಯುಕ್ತರು ವೃಂದಕ್ಕೆ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವುದನ್ನು ಕಾಯ್ದಿರಿಸಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವ ನೇಮಕಾತಿ ವಿಧಾನವನ್ನು ನಿಗಧಿಪಡಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮೂಲಕ ನಿಗಧಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2. ಆರು ತಿಂಗಳ ಒಳಗಾಗಿ ಈ ನೇಮಕಾತಿ ಕಾರ್ಯವಿಧಾನವನ್ನು ಕರ್ನಾಟಕ ಸಾಮಾನ್ಯ ಸೇವೆಗಳು (ಮೋಟಾರು ವಾಹನಗಳ ಶಾಖೆ) (ನೇಮಕಾತಿ) ನಿಯಮಗಳು 2013 ಇದಕ್ಕೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.
3. ಆರು ತಿಂಗಳ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ : ಸಿಆಸುಇ 184 ಸೇನಿಡಿ 2013, ದಿನಾಂಕ : 02–01–2014ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಬೀರೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ.

**ಅನುಬಂಧ**

| ಕ್ರ. ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1. | ಅಪರ ಸಾರಿಗೆ ಆಯುಕ್ತರು (ವೇತನ ಶ್ರೇಣಿ ರೂ. 48,900–63,600) | 04 | ಮುಂಬಡ್ತಿ ಮೂಲಕ :<br>ಜಂಟಿ ಸಾರಿಗೆ ಆಯುಕ್ತರ ವೃಂದದಲ್ಲಿ ಎರಡು ವರ್ಷಗಳಿಗೆ ಕಡಿಮೆ ಇರದ ಸೇವೆಯನ್ನು ಸಲ್ಲಿಸತಕ್ಕದ್ದು. |

**ಕೆ. ಬೀರೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ.

PR. 64

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಅನುಷ್ಠಾನಗೊಳಿಸುತ್ತಿರುವ ವಿವಿಧ ಯೋಜನೆಗಳ ಫಲಾನುಭವಿಗಳನ್ನು ಆಯ್ಕೆ ಮಾಡುವ ಸಮಿತಿಯನ್ನು ಪುನರ್ ರಚಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಕಇ 221 ಬಿಸಿಎ 2008, ದಿನಾಂಕ: 02.01.2009.

2) ಟಿಪ್ಪಣಿ ಸಂಖ್ಯೆ: ಸಕಇ ಹಿಂವಕಸ/ಟಿ/2001/2013–14, ದಿನಾಂಕ: 24.10.2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸ. (1)ರ ಆದೇಶದಲ್ಲಿ ಕರ್ನಾಟಕ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಗಳಲ್ಲಿ ಅನುಷ್ಠಾನಗೊಳಿಸುತ್ತಿರುವ ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಹಾಗೂ ಜಮೀನುಗಳನ್ನು ಗುರುತಿಸಿ ಆಯ್ಕೆ ಮಾಡಲು ವಿಧಾನ ಸಭಾ ಕ್ಷೇತ್ರದ ಶಾಸಕರುಗಳನ್ನೊಳಗೊಂಡಂತೆ ಆಯ್ಕೆ ಸಮಿತಿಯನ್ನು ರಚಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಮಾನ್ಯ ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಟಿಪ್ಪಣಿಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತದಿಂದ ಅನುಷ್ಠಾನಗೊಳಿಸಲಾಗುತ್ತಿರುವ ವಿವಿಧ ಯೋಜನೆಗಳಾದ ಗಂಗಾ ಕಲ್ಯಾಣ ಹಾಗೂ ನೇರ ಸಾಲ ಮತ್ತು ಇನ್ನಿತರೆ ಯೋಜನೆಯಡಿ ಫಲಾನುಭವಿಗಳನ್ನು ಗುರ್ತಿಸುವ ಸಲುವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ಆದೇಶವನ್ನು ಮಾರ್ಪಡಿಸಿ ಶಾಸಕರುಗಳು/ಸದಸ್ಯರುಗಳನ್ನೊಳಗೊಂಡಂತೆ ಕ್ಷೇತ್ರವಾರು ಆಯ್ಕೆ ಸಮಿತಿಯನ್ನು ಪುನರ್ ರಚಿಸಲು ಸೂಚಿಸಿರುತ್ತಾರೆ.

ಅದರಂತೆ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಅನುಷ್ಠಾನಗೊಳಿಸುತ್ತಿರುವ ವಿವಿಧ ಯೋಜನೆಗಳ ಫಲಾನುಭವಿಗಳನ್ನು ಗುರ್ತಿಸಿ ಕ್ಷೇತ್ರವಾರು ಆಯ್ಕೆ ಸಮಿತಿಯನ್ನು ಪುನರ್ ರಚಿಸಲು ತೀರ್ಮಾನಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹಿಂವಕ 302 ಬಿಸಿಎ 2013, ಬೆಂಗಳೂರು, ದಿನಾಂಕ : 20.12.2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತದಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಫಲಾನುಭವಿಗಳನ್ನು ಹಾಗೂ ಜಮೀನುಗಳನ್ನು ಗುರುತಿಸಿ ಆಯ್ಕೆ ಮಾಡುವ ಸಲುವಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಧಾನಸಭಾ ಕ್ಷೇತ್ರವಾರು ಆಯಾ ಶಾಸಕರುಗಳ ಅಧ್ಯಕ್ಷತೆಯಲ್ಲಿ ಸದಸ್ಯರುಗಳನ್ನೊಳಗೊಂಡಂತೆ ಈ ಕೆಳಕಂಡ ಆಯ್ಕೆ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ವಿಧಾನಸಭಾ ಕ್ಷೇತ್ರದ ಶಾಸಕರು | ಅಧ್ಯಕ್ಷರು |
| 2. | ತಾಲ್ಲೂಕಿನಲ್ಲಿ ಖಾಯಂ ಆಗಿ ವಾಸಿಸುವ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 3. | ತಾಲ್ಲೂಕು ತಹಶೀಲ್ದಾರ್ | ಸದಸ್ಯರು |
| 4. | ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ | ಸದಸ್ಯರು |
| 5. | ಸಹಾಯಕ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 6. | ಸಹಾಯಕ ಕಾರ್ಯಪಾಲಕ ಅಭಿಯಂತರರು, ESCOM | ಸದಸ್ಯರು |
| 7. | ಹಿಂದುಳಿದ ವರ್ಗಗಳ ತಾಲ್ಲೂಕು ವಿಸ್ತರಣಾಧಿಕಾರಿ | ಸದಸ್ಯರು |
| 8. | ಹಿಂದುಳಿದ ವರ್ಗಕ್ಕೆ ಸೇರಿದ ಇಬ್ಬರು ಅಧಿಕಾರೇತರ ಸದಸ್ಯರು | ಸದಸ್ಯರು |
| 9. | ಪರಿಶಿಷ್ಟ ಜಾತಿಗೆ ಸೇರಿದ ಓರ್ವ ಅಧಿಕಾರೇತರ ಸದಸ್ಯರು | ಸದಸ್ಯರು |
| 10. | ಸಾಮಾನ್ಯ ವರ್ಗಕ್ಕೆ ಸೇರಿದ ಅಧಿಕಾರೇತರ ಓರ್ವ ಸದಸ್ಯರು | ಸದಸ್ಯರು |
| 11. | ಅಲ್ಪಸಂಖ್ಯಾತರ ಓರ್ವ ಅಧಿಕಾರೇತರ ಸದಸ್ಯರು | ಸದಸ್ಯರು |
| 12. | ಜಿಲ್ಲಾ ವ್ಯವಸ್ಥಾಪಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ. | ಸದಸ್ಯರು |

ಈ ಮೇಲ್ಕಂಡ ಆಯ್ಕೆ ಸಮಿತಿಗೆ ಆಯಾ ಕ್ಷೇತ್ರದ ಶಾಸಕರನ್ನು ಸಮಿತಿಯ ಅಧ್ಯಕ್ಷರನ್ನಾಗಿ ಮತ್ತು ಇತರೆ ಸದಸ್ಯರುಗಳನ್ನು ಒಳಗೊಂಡ ಆಯ್ಕೆ ಸಮಿತಿಯನ್ನು ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಸಚಿವರ ಅನುಮೋದನೆಯೊಂದಿಗೆ ರಚಿಸಲು ತೀರ್ಮಾನಿಸಲಾಗಿದೆ.

**ಸೂಚನೆ:–** ಕ್ರ.ಸ. 8,9,10,ಮತ್ತು 11 ರಲ್ಲಿ ತಿಳಿಸಿರುವ 5 ಅಧಿಕಾರೇತರ ಸದಸ್ಯರಲ್ಲಿ ಕಡ್ಡಾಯವಾಗಿ ಓರ್ವ ಮಹಿಳೆ ಸದಸ್ಯರಾಗಿರತಕ್ಕದ್ದು.

ಈ ಸಮಿತಿಯು ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

1. ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಆಯ್ಕೆ ಮಾಡುವುದು.
2. ಈ ಕಾರ್ಯಕ್ರಮವು ಯಶಸ್ವಿಯಾಗಿ ಕಾರ್ಯಗತವಾಗಲು ಸಲಹೆ ನೀಡುವುದು.
3. ಯೋಜನೆಯಲ್ಲಿ ಲೋಪದೋಷಗಳು ಕಂಡುಬಂದರೆ ಅಂತಹುಗಳನ್ನು ನಿವಾರಿಸಲು ಸಲಹೆ ನೀಡುವುದು.
4. ಗುಣಮಟ್ಟದ ಸಲಕರಣೆಗಳನ್ನು ಅಳವಡಿಸಲು ಸಲಹೆ ನೀಡುವುದು.
5. ಫಲಾನುಭವಿಗಳು ಇದರ ಪೂರ್ಣ ಲಾಭ ಪಡೆಯಲು ಅವರಿಗೆ ಅಗತ್ಯ ಪ್ರೇರೇಪಣೆ ನೀಡುವುದು.
6. ಫಲಾನುಭವಿಗಳಿಗೆ ಯೋಜನೆಯ ಪೂರ್ಣಲಾಭ ಪಡೆಯಲು ಬೇರೆ ಇಲಾಖೆಯಿಂದ ನೆರವು ಅಥವಾ ಸಹಾಯ ಅಗತ್ಯವಾದಲ್ಲಿ ಅಂತಹ ಸಹಾಯ ಮತ್ತು ನೆರವನ್ನು ಸಂಬಂಧಿಸಿದ ಇಲಾಖೆಗಳಿಂದ ಒದಗಿಸಿಕೊಡಲು ಸಲಹೆ ನೀಡುವುದು.
7. ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾದ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗಗಳಿಗೆ ಸೇರಿದ ರೈತರ ಬಗ್ಗೆ ವಿವರಗಳನ್ನು ಪಟ್ಟಿ ಮಾಡಿ ನಿರ್ವಹಿಸುವುದು.
8. ಈ ಸಮಿತಿ ಸಲಹೆಗಳನ್ನು ಘಟಕದ ಆರ್ಥಿಕ ಮಿತಿಗೆ ಒಳಪಟ್ಟು ಅಧಿಕಾರಿಗಳು ಪರಿಶೀಲಿಸಿ ಪರಿಪಾಲನೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಎರೆಕುಪ್ಪಿ,**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

PR. 111

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನ ಟ್ರಸ್ಟ್ ಸ್ಥಾಪನೆ ಮಾಡುವ ಬಗ್ಗೆ ಪರಿಷ್ಕೃತ ಆದೇಶ.

**ಓದಲಾಗಿದೆ:**

1. ವ್ಯವಸ್ಥಾಪಕ ನಿರ್ದೇಶಕರು, ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು, ರವರ ಏಕಕಡತ ಟಿಪ್ಪಣಿ ಸಂಖ್ಯೆ: ದೇಹಿನಿ:ಸಿಬ್ಬಂದಿ:ಸ.ರಾ.ಪ್ರ:ಸಿ.ಆರ್.23/2012–13, ದಿ: 29–05–2012
2. ಸರ್ಕಾರದ ಆದೇಶ ಸಂಖ್ಯೆ: ಸಕಇ 186/ಬಿಎಂಎಸ್.2012 ಬೆಂಗಳೂರು. ದಿ:18–08–2012
3. ದಿ:05–10–2012ರಂದು ಸನ್ಮಾನ್ಯ ಉಪ ಮುಖ್ಯಮಂತ್ರಿಗಳು, ಕಂದಾಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
4. ವ್ಯವಸ್ಥಾಪಕ ನಿರ್ದೇಶಕರು, ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು ರವರ ಏಕಕಡತ ಟಿಪ್ಪಣಿ ಸಂಖ್ಯೆ: ದೇಹಿನಿ:ಸಿಬ್ಬಂದಿ:ಸ.ರಾ.ಪ್ರ:ಸಿ.ಆರ್.23/2012–13 ದಿ:03–11–2012

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು ಇವರು ಕ್ರಾಂತಿವೀರ, ದೇಶಭಕ್ತ ದಿವಂಗತ ಸಂಗೊಳ್ಳಿ ರಾಯಣ್ಣನ ಹೆಸರಲ್ಲಿ 2012–13ನೇ ಸಾಲಿನಲ್ಲಿ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣನ ಪ್ರತಿಷ್ಠಾನವನ್ನು ಸ್ಥಾಪಿಸುವ ಸಲುವಾಗಿ ಒಂದು ರಾಜ್ಯ ಮಟ್ಟದ ಸಮಿತಿಯನ್ನು ರಚಿಸಲು ಕೋರಿರುತ್ತಾರೆ.

ಮೇಲೆ(2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಿ.ದೇವರಾಜ ಅರಸು ಸಂಶೋಧನಾ ಸಂಸ್ಥೆಯ ವತಿಯಿಂದ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನವನ್ನು ನೋಂದಾಯಿತ ಟ್ರಸ್ಟ್ ಮೂಲಕ ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿ:05–10–2012ರಂದು ಸನ್ಮಾನ್ಯ ಉಪ ಮುಖ್ಯಮಂತ್ರಿಗಳು, ಕಂದಾಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ, ಪ್ರತಿಷ್ಠಾನದಲ್ಲಿ ಮಾನ್ಯ ಕಂದಾಯ ಸಚಿವರನ್ನು ಪ್ರತಿಷ್ಠಾನದ ಚೇರ್ಮನ್ ಆಗಿ, ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರನ್ನು ಕೋ–ಚೇರ್‌ಮನ್ ಆಗಿ, ಡಿ.ದೇವರಾಜ ಅರಸು ಸಂಶೋಧನಾ ಸಂಸ್ಥೆ ಮತ್ತು ಇದರ ನಿರ್ದೇಶಕರ ಬದಲಾಗಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ವತಿಯಿಂದ ಅನುಷ್ಠಾನಗೊಳಿಸಲು ಮತ್ತು ಇದರ ವ್ಯವಸ್ಥಾಪಕ ನಿರ್ದೇಶಕರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಲು ತೀರ್ಮಾನಿಸಲಾಗಿದೆ.

ಅದರಂತೆ ವ್ಯವಸ್ಥಾಪಕ ನಿರ್ದೇಶಕರು, ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಬೆಂಗಳೂರು ರವರು ಮೇಲೆ ಓದಲಾದ (4)ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ ದಿ: 05–10–2012ರಂದು ಸನ್ಮಾನ್ಯ ಉಪ ಮುಖ್ಯಮಂತ್ರಿಗಳು, ಕಂದಾಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳ ಪ್ರಕಾರ ಪ್ರತಿಷ್ಠಾನವನ್ನು ಸ್ಥಾಪಿಸಲು ಸರ್ಕಾರದ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ. ಆದ್ದರಿಂದ ದಿ:18–08–2012ರ ಉಲ್ಲೇಖ (2)ರ ಸರ್ಕಾರದ ಆದೇಶವನ್ನು ಮಾರ್ಪಡಿಸಿ, ಪರಿಷ್ಕೃತ ಸರ್ಕಾರಿ ಆದೇಶವನ್ನು ಹೊರಡಿಸುವ ಸಂಬಂಧ ಈ ಆದೇಶ.

**ಆದೇಶ ಸಂಖ್ಯೆ: ಹಿಂವಕಇ 245 ಬಿಸಿಎ 2012, ಬೆಂಗಳೂರು, ದಿನಾಂಕ: 10–12–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿ:18–08–2012ರ ಆದೇಶವನ್ನು ಪರಿಷ್ಕರಿಸಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನವನ್ನು ನೋಂದಾಯಿತ ಟ್ರಸ್ಟ್ ಮೂಲಕ ಸ್ಥಾಪಿಸಲು ಸರ್ಕಾರವು ಅನುಮತಿ ನೀಡಿದೆ. ಸನ್ಮಾನ್ಯ ಮುಖ್ಯಮಂತ್ರಿಗಳು ಈ ಟ್ರಸ್ಟ್‌ನ ಮುಖ್ಯ ಪೋಷಕರಾಗಿರುವರು. ಟ್ರಸ್ಟ್‌ನ ಚೇರ್ಮನ್, ಕೋ–ಚೇರ್ಮನ್ ಹಾಗೂ ಇತರೆ ಸದಸ್ಯರ ವಿವರಗಳು ಈ ಕೆಳಕಂಡಂತೆ ಇರುತ್ತವೆ.

| | | |
|---|---|---|
| 1 | ಕಂದಾಯ ಸಚಿವರು, ಕರ್ನಾಟಕ ಸರ್ಕಾರ | ಚೇರ್ಮನ್ |
| 2 | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು, ಕರ್ನಾಟಕ ಸರ್ಕಾರ | ಕೋ–ಚೇರ್ಮನ್ |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| 5 | ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 6 | ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ | ಸದಸ್ಯರು |
| 7 | ಮುಖ್ಯ ಎಂಜಿನಿಯರ್ (ಸಂಪರ್ಕ ಮತ್ತು ಕಟ್ಟಡ), ಲೋಕೋಪಯೋಗಿ ಇಲಾಖೆ | ಸದಸ್ಯರು |
| 8 | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| 9 | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯರು |

| | | |
|---|---|---|
| 10 | ಸರ್ಕಾರದಿಂದ ನಾಮನಿರ್ದೇಶಿತ ಸದಸ್ಯರು | 4 ಜನರ |
| | ವ್ಯವಸ್ಥಾಪಕ ನಿರ್ದೇಶಕರು, ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ | ಸದಸ್ಯ-ಕಾರ್ಯದರ್ಶಿ |

"ಕ್ರಾಂತಿವೀರ ಸಂಗೊಳ್ಳಿರಾಯಣ್ಣ ಪ್ರತಿಷ್ಠಾನ" ಟ್ರಸ್ಟ್ ಗೆ ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸಲು ಅಧಿಕಾರ ನೀಡಲಾಗಿದೆ.

1) "ಕ್ರಾಂತಿವೀರ ಸಂಗೊಳ್ಳಿರಾಯಣ್ಣ ಪ್ರತಿಷ್ಠಾನ" ದ ಹೆಸರಿನಲ್ಲಿ ಟ್ರಸ್ಟ್ ರಚಿಸಲು ಕ್ರಮ ಕೈಗೊಳ್ಳುವುದು. ಟ್ರಸ್ಟ್ ಡೀಡ್ (Trust Deed) ನ ಕರಡನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿ ಸರ್ಕಾರದ ಅನುಮೋದನೆ ಪಡೆದು ನಂತರ ನೋಂದಾಯಿಸುವುದು.

2) "ಕ್ರಾಂತಿವೀರ ಸಂಗೊಳ್ಳಿರಾಯಣ್ಣ ಪ್ರತಿಷ್ಠಾನ" ವತಿಯಿಂದ ಕೈಗೊಳ್ಳಬಹುದಾದ ಯೋಜನೆಗಳು ಹಾಗೂ ಕಾರ್ಯಗಳನ್ನು ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ (ನಿ), ವತಿಯಿಂದ ಅನುಷ್ಠಾನಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುಜಾತಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**PR. 112**

## ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ಸೇರ್ಪಡೆ**

**ಸಂಖ್ಯೆ: ತೋಇ 03 ರೇಕೃವಿ 2013, ಬೆಂಗಳೂರು, ದಿನಾಂಕ 17-12-2013**

ಸರ್ಕಾರದ ಆದೇಶ ಸಂಖ್ಯೆ : ತೋಇ 3 ರೇಕೃವಿ 2013, ದಿನಾಂಕ 10-12-2013ರ ಆದೇಶ ಭಾಗದ ಕಂಡಿಕೆ 2 ರಲ್ಲಿನ 3ನೇ ಪಂಕ್ತಿ "2851-00-107-1-38-059" ರ ನಂತರ "2851-00-107-1-35 (422) ಮತ್ತು 2851-00-107-1-35 (423)" ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಬಿ. ವಿಜಯಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ (ರೇಷ್ಮೆ)

**PR. 135**
**SC. 50**

## ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನ ರಾಜವಂತಿ ತೋಟಗಾರಿಕೆ ಕ್ಷೇತ್ರದಲ್ಲಿ 5 ಎಕರೆ ಜಮೀನನ್ನು ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು, ಇವರಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** 3) ಸಂಶೋಧನಾ ನಿರ್ದೇಶಕರು, ಸಂಶೋಧನಾ ನಿರ್ದೇಶನಾಲಯ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಪತ್ರ ಸಂ. ನಿ/ ರಾತೋಕ್ಷೇ / 2012-13, ದಿನಾಂಕ 09-11-2012.

4) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ಇಡಿ/ಕೆ.ಎಸ್.ಎಚ್.ಡಿ.ಎ./ಸತೋಅ 2/33/2007-2008, ದಿನಾಂಕ 21-10-2013.

ಪ್ರಸ್ತಾವನೆ :-

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ, ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನ ರಾಜವಂತಿ ತೋಟಗಾರಿಕೆ ಕ್ಷೇತ್ರದಲ್ಲಿನ 22 ಎಕರೆ ಜಮೀನನ್ನು ಕೃಷಿ ಸಂಶೋಧನಾ ಕೇಂದ್ರ ಕಾರ್ಯ ಚಟುವಟಿಕೆಗಳ ವಿಸ್ತರಣೆಗಾಗಿ ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರಿಗೆ ಹಸ್ತಾಂತರಿಸುವಂತೆ ಸಂಶೋಧನಾ ನಿರ್ದೇಶಕರು, ಸಂಶೋಧನಾ ನಿರ್ದೇಶನಾಲಯ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ, ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನ ರಾಜವಂತಿ ತೋಟಗಾರಿಕೆ ಕ್ಷೇತ್ರದಲ್ಲಿ 5 ಎಕರೆ ಜಮೀನನ್ನು ಕೃಷಿ ಸಂಶೋಧನಾ ಕೇಂದ್ರದ ಕಾರ್ಯ ಚಟುವಟಿಕೆಗಳ ವಿಸ್ತರಣೆಗಾಗಿ ಸದರಿ ಪ್ರದೇಶದ ಭೂ ಒಡೆತನವನ್ನು ತೋಟಗಾರಿಕೆ ಇಲಾಖೆಯ ಅಡಿಯಲ್ಲಿ ಉಳಿಸಿಕೊಂಡು, ಈ ಕೆಳಕಂಡ ಷರತ್ತಿನ ಮೇಲೆ ಕೃಷಿ ವಿಶ್ವವಿದ್ಯಾನಿಲಯ, ಜಿ.ಕೆ.ವಿ.ಕೆ., ಬೆಂಗಳೂರು, ಇವರಿಗೆ ಹಸ್ತಾಂತರಿಸಲು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 11ನೇ ಕಾರ್ಯಕಾರಿ ಸಮಿತಿ ಸಭೆಯು ತೀರ್ಮಾನಿಸಿದ್ದು, ಇದರನ್ವಯ ಆದೇಶ ಹೊರಡಿಸುವಂತೆ ಕೋರಿದ್ದಾರೆ.

**ಷರತ್ತು :–**

ಬಳ್ಳಾರಿ ರಸ್ತೆಗೆ ಹೊಂದಿಕೊಂಡಂತಿರುವ ಕೃಷಿ ವಿಶ್ವವಿದ್ಯಾನಿಲಯ, ಜಿ.ಕೆ.ವಿ.ಕೆ., ಬೆಂಗಳೂರು, ಇಲ್ಲಿ ½ ಎಕರೆ ಭೂಮಿಯನ್ನು ತೋಟಗಾರಿಕೆ ಇಲಾಖೆಯ ಅಧೀನದಲ್ಲಿರುವ ಹಾಪ್‌ಕಾಮ್ಸ್, ಬೆಂಗಳೂರು ಮತ್ತು ಜೈವಿಕ ಕೃಷಿಕ್ ಸೊಸೈಟಿರವರ ವತಿಯಿಂದ ಮಾರುಕಟ್ಟೆ ಮಳಿಗೆಗಳನ್ನು ನಿರ್ಮಿಸಲು ತೋಟಗಾರಿಕೆ ಇಲಾಖೆಗೆ ವರ್ಗಾಯಿಸುವುದು.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 18 ತೋಇವಿ 2013, ಬೆಂಗಳೂರು, ದಿನಾಂಕ : 30–11–2013**

ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನ ರಾಜವಂತಿ ತೋಟಗಾರಿಕೆ ಕ್ಷೇತ್ರದಲ್ಲಿ 5 ಎಕರೆ ಜಮೀನನ್ನು ಕೃಷಿ ಸಂಶೋಧನಾ ಕೇಂದ್ರದ ಕಾರ್ಯ ಚಟುವಟಿಕೆಗಳ ವಿಸ್ತರಣೆಗಾಗಿ, ಸದರಿ ಜಮೀನಿನ ಒಡೆತನವನ್ನು ತೋಟಗಾರಿಕೆ ಇಲಾಖೆಯಲ್ಲಿಯೇ ಉಳಿಸಿಕೊಂಡು ಹಾಗೂ ಬಳ್ಳಾರಿ ರಸ್ತೆಗೆ ಹೊಂದಿಕೊಂಡಂತಿರುವ ಕೃಷಿ ವಿಶ್ವವಿದ್ಯಾನಿಲಯ, ಜಿ.ಕೆ.ವಿ.ಕೆ., ಬೆಂಗಳೂರು, ಇಲ್ಲಿ ½ ಎಕರೆ ಭೂಮಿಯನ್ನು ತೋಟಗಾರಿಕೆ ಇಲಾಖೆಯ ಅಧೀನದಲ್ಲಿರುವ ಹಾಪ್‌ಕಾಮ್ಸ್, ಬೆಂಗಳೂರು ಮತ್ತು ಜೈವಿಕ ಕೃಷಿಕ್ ಸೊಸೈಟಿರವರ ವತಿಯಿಂದ ಮಾರುಕಟ್ಟೆ ಮಳಿಗೆಗಳನ್ನು ನಿರ್ಮಿಸಲು ತೋಟಗಾರಿಕೆ ಇಲಾಖೆಗೆ ವರ್ಗಾಯಿಸುವ ಷರತ್ತಿಗೊಳಪಟ್ಟು ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರಿಗೆ ಹಸ್ತಾಂತರಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್,**
ಸರ್ಕಾರದ ಉಪ ಕಾರ್ಯದರ್ಶಿ (ತೋಟಗಾರಿಕೆ),
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ.

**PR. 136**
**SC. 10**

## ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ವಿಷಯ:–** ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿನ ರಂಗಸ್ವಾಮಿಗುಡ್ಡ ತೋಟಗಾರಿಕೆ ಕ್ಷೇತ್ರದಲ್ಲಿ ಕೃಷಿ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲು ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು, ಇವರಿಗೆ 50 ಎಕರೆ ಜಮೀನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:–**
1) ಕುಲ ಸಚಿವರು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಪತ್ರ ಸಂ. ಕು.ಸ.ಕ/ಕೃ.ಸಂ. ಕೇ. ಕುಣಿಗಲ್/ 70/2013–14, ದಿನಾಂಕ 03–06–2013.
2) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ಇಡಿ/ಕೆ.ಎಸ್.ಎಚ್.ಡಿ.ಎ./ಸತೋನಿ 2/07/ 2013–14, ದಿನಾಂಕ 26–10–2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ, ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿನ ರಂಗಸ್ವಾಮಿಗುಡ್ಡ ತೋಟಗಾರಿಕೆ ಕ್ಷೇತ್ರದಲ್ಲಿ ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ವತಿಯಿಂದ ಕೃಷಿ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲು 100 ಎಕರೆ ಪ್ರದೇಶವನ್ನು ವರ್ಗಾಯಿಸುವಂತೆ ಕುಲ ಸಚಿವರು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಕೋರಿರುತ್ತಾರೆ.

ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಕೋರಿಕೆಗೆ ಸಂಬಂಧಿಸಿದಂತೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರಿಗೆ ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿನ ರಂಗಸ್ವಾಮಿಗುಡ್ಡ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ.2 ರಲ್ಲಿ ಹೇಮಾವತಿ ಕಾಲುವೆಯ ಪೂರ್ವ ಭಾಗದಲ್ಲಿರುವ 50 ಎಕರೆ ಪ್ರದೇಶವನ್ನು ಕೃಷಿ ಸಂಶೋಧನಾ ಕಾರ್ಯಗಳಿಗಾಗಿ ಈ ಪ್ರದೇಶದ ಭೂ ಒಡೆತನವನ್ನು ತೋಟಗಾರಿಕೆ ಇಲಾಖೆಯಲ್ಲಿಯೇ ಉಳಿಸಿಕೊಂಡು ಹಸ್ತಾಂತರಿಸಲು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 11ನೇ ಕಾರ್ಯಕಾರಿ ಸಮಿತಿ ಸಭೆಯು ತೀರ್ಮಾನಿಸಿದ್ದು, ಇದರನ್ವಯ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 141 ತೋಇವಿ 2013, ಬೆಂಗಳೂರು, ದಿನಾಂಕ : 26–11–2013**

ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿನ ರಂಗಸ್ವಾಮಿಗುಡ್ಡ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ.2 ರಲ್ಲಿ ಹೇಮಾವತಿ ಕಾಲುವೆಯ ಪೂರ್ವ ಭಾಗದಲ್ಲಿರುವ 50 ಎಕರೆ ಪ್ರದೇಶವನ್ನು ಕೃಷಿ ಸಂಶೋಧನಾ ಕಾರ್ಯಗಳಿಗಾಗಿ ಈ ಜಮೀನಿನ ಒಡೆತನವನ್ನು ತೋಟಗಾರಿಕೆ ಇಲಾಖೆಯಲ್ಲಿಯೇ ಉಳಿಸಿಕೊಂಡು ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು, ಇವರಿಗೆ ಹಸ್ತಾಂತರಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್,**
ಸರ್ಕಾರದ ಉಪ ಕಾರ್ಯದರ್ಶಿ (ತೋಟಗಾರಿಕೆ)
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ.

**PR. 137**
**SC. 10**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಆಶಾಮಂದಿರ ಯೋಜನೆಯಡಿ ನಿರ್ಮಾಣ ಮಾಡಿರುವ ಮನೆಗಳ ಬಗ್ಗೆ ತನಿಖೆ ನಡೆಸುವ ಕುರಿತು.

**ಉಲ್ಲೇಖ:**
1) ಮಾನ್ಯ ನಗರಾಭಿವೃದ್ಧಿ ಕಾನೂನು ಮತ್ತು ಸಂಸದೀಯ ವ್ಯವಹಾರ ಸಚಿವರ ವಿಶೇಷಾಧಿಕಾರಿ ರವರ ಟಿಪ್ಪಣಿ ಸಂಖ್ಯೆ : ನಕಾಸಂಜ/ಆಕಾ/544/2011–12, ದಿನಾಂಕ 17–12–2011.
2) ಸರ್ಕಾರದ ಪತ್ರ ಸಂಖ್ಯೆ ನಅಇ 25 ಮೈಅಪ್ರಾ 2012, ದಿನಾಂಕ 31–01–2012.
3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಪತ್ರ ಸಂಖ್ಯೆ : ನಗ್ರಾಯೋ/ಉ.ನಿ./ಮೈಪ್ರಾ/217/2011–12, ದಿನಾಂಕ 10–10–2013.

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ವತಿಯಿಂದ ಆಶಾಮಂದಿರ ಯೋಜನೆಯಡಿ ನಿರ್ಮಾಣ ಮಾಡಿರುವ ಮನೆಗಳು ಸಂಪೂರ್ಣ ಶಿಥಿಲವಾಗಿದ್ದು, ವಾಸ ಮಾಡಲು ಯೋಗ್ಯವಾಗಿರುವುದಿಲ್ಲವೆಂದು ಹಾಗೂ ಕೆಲವು ಕಡೆ ಮೊದಲನೇ ಅಂತಸ್ತು ಇಲ್ಲದೆ ಇರುವುದು ಸರ್ಕಾರದ ಗಮನಕ್ಕೂ ಬಂದಿರುವುದರಿಂದ ಈ ಬಗ್ಗೆ ಅಧಿಕಾರಿಗಳ ತಂಡವನ್ನು ರಚಿಸಿ ಸಮಗ್ರ ತನಿಖೆ ನಡೆಸಿ ವರದಿ ನೀಡಲು ಉಲ್ಲೇಖ (1)ರ ಟಿಪ್ಪಣಿಯಲ್ಲಿ ಮಾನ್ಯ ನಗರಾಭಿವೃದ್ಧಿ ಕಾನೂನು ಮತ್ತು ಸಂಸದೀಯ ವ್ಯವಹಾರ ಸಚಿವರ ವಿಶೇಷಾಧಿಕಾರಿ ರವರು ಸೂಚಿಸಿರುತ್ತಾರೆ. ಈ ಬಗ್ಗೆ ತನಿಖೆ ನಡೆಸಿ ವರದಿಯನ್ನು ನೀಡುವಂತೆ ಉಲ್ಲೇಖ (2)ರ ಪತ್ರದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರನ್ನು ಕೋರಲಾಗಿರುತ್ತದೆ.

ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಉಲ್ಲೇಖ (3)ರ ಪತ್ರದಲ್ಲಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಆಶಾಮಂದಿರ ಯೋಜನೆಯಡಿ ನಿರ್ಮಾಣ ಮಾಡಿರುವ ಮನೆಗಳ ಬಗ್ಗೆ ತನಿಖೆ ನಡೆಸುವ ಬಗ್ಗೆ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದ್ದು, ತನಿಖಾ ಸಮಿತಿಗೆ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಸ್ಪಂದನೆ ಸಿಗದ ಕಾರಣ ತನಿಖೆ ನಡೆಸಲು ಸಾಧ್ಯವಾಗಿಲ್ಲವೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 25 ಮೈಅಪ್ರಾ 2012, ಬೆಂಗಳೂರು, ದಿನಾಂಕ : 10–12–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಆಶಾಮಂದಿರ ಯೋಜನೆಯಡಿ ನಿರ್ಮಾಣ ಮಾಡಿರುವ ಮನೆಗಳು ಸಂಪೂರ್ಣ ಶಿಥಿಲವಾಗಿದ್ದು, ವಾಸ ಮಾಡಲು ಯೋಗ್ಯವಾಗಿರುವುದಿಲ್ಲವೆಂದು ಹಾಗೂ ಕೆಲವು ಕಡೆ ಮೊದಲನೇ ಅಂತಸ್ತು ಇಲ್ಲದಿರುವ ಬಗ್ಗೆ ಪರಿಶೀಲಿಸಲು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರನ್ನು ತನಿಖಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ತನಿಖಾಧಿಕಾರಿಗಳು ತನಿಖೆಯನ್ನು ನಡೆಸಿ ತಮ್ಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸಹ ತಿಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

PR. 139
SC. 50

## ಆರ್ಥಿಕ ಸಚಿವಾಲಯ

### ಸೇರ್ಪಡೆ (ADDENDUM)

**ಸಂಖ್ಯೆ : ಆಇ 195 ಆಖಇ 2013, ಬೆಂಗಳೂರು, ದಿನಾಂಕ 10–01–2014**

**ವಿಷಯ:** ರಾಜ್ಯದಲ್ಲಿನ ಖಜಾನೆ ಕಟ್ಟಡಗಳನ್ನು ದುರಸ್ತಿಗೊಳಿಸುವುದು ಹಾಗೂ ನವೀಕರಿಸುವುದು.

ಮೇಲಿನ ವಿಷಯ ಕುರಿತ ಸರ್ಕಾರಿ ಆದೇಶ ಸಂಖ್ಯೆ ಆಇ 195 ಆಖಇ 2013ರ ದಿನಾಂಕ 23–11–2013ರ ಆದೇಶ ಭಾಗದ ಮೊದಲನೆಯ ಕಂಡಿಕೆಯ ನಂತರ ಈ ಕೆಳಕಂಡ ವೆಚ್ಚಾನುಮತಿ ಬಗೆಗಿನ ಕಂಡಿಕೆಗಳನ್ನು ಸೇರಿಸಿ ಓದಿಕೊಳ್ಳುವುದು.

"ಪ್ರಸ್ತುತ ಆರ್ಥಿಕ ವರ್ಷ 2013–14 ರಲ್ಲಿ ಭರಿಸಲಿರುವ ರೂ.20 ಕೋಟಿ ಅನುದಾನವನ್ನು ಕೆಳಕಂಡಂತೆ ಬಿಡುಗಡೆ ಮಾಡುವುದು.

| ಕ್ರ.ಸಂ. | ಕಚೇರಿಯ ಹೆಸರು | ಲೆಕ್ಕಶೀರ್ಷಿಕೆ | ವಿವರಣೆ | ಮೊತ್ತ ರೂ. ಕೋಟಿಗಳಲ್ಲಿ. |
|---|---|---|---|---|
| 1 | ಮುಖ್ಯ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಸಂಪರ್ಕ ಮತ್ತು ಕಟ್ಟಡಗಳು ಉತ್ತರ ವಲಯ, ಧಾರವಾಡ | 2054–00–095–0–01 (ಯೋಜನೇತರ "125" ಖಜಾನೆ ಆಧುನೀಕರಣ | ರಾಜ್ಯದಲ್ಲಿನ 216 ಖಜಾನೆ ಕಟ್ಟಡಗಳ ನವೀಕರಣ ಹಾಗೂ ದುರಸ್ತಿಗೊಳಿಸುವ ಸಂಬಂಧ ಉತ್ತರ ವಲಯದ ಕ್ಷೇತ್ರ ವ್ಯಾಪ್ತಿಯಲ್ಲಿ ಬರತಕ್ಕಂತಹ ಖಜಾನೆ ಕಟ್ಟಡಗಳ ನವೀಕರಣ ಹಾಗೂ ದುರಸ್ತಿಗಾಗಿ | 10.00 |

| ಕ್ರ.ಸಂ. | ಕಚೇರಿಯ ಹೆಸರು | ಲೆಕ್ಕಶೀರ್ಷಿಕೆ | ವಿವರಣೆ | ಮೊತ್ತ ರೂ. ಕೋಟಿಗಳಲ್ಲಿ. |
|---|---|---|---|---|
| 2 | ಮುಖ್ಯ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಸಂಪರ್ಕ ಮತ್ತು ಕಟ್ಟಡಗಳು ದಕ್ಷಿಣ ವಲಯ, ಬೆಂಗಳೂರು | 2054–00–095–0–01 (ಯೋಜನೇತರ "125" ಖಜಾನೆ ಆಧುನೀಕರಣ | ರಾಜ್ಯದಲ್ಲಿನ 216 ಖಜಾನೆ ಕಟ್ಟಡಗಳ ನವೀಕರಣ ಹಾಗೂ ದುರಸ್ತಿಗೊಳಿಸುವ ಸಂಬಂಧ ದಕ್ಷಿಣ ವಲಯದ ಕ್ಷೇತ್ರ ವ್ಯಾಪ್ತಿಯಲ್ಲಿ ಬರತಕ್ಕಂತಹ ಖಜಾನೆ ಕಟ್ಟಡಗಳ ನವೀಕರಣ ಹಾಗೂ ದುರಸ್ತಿಗಾಗಿ | 10.00 |
| | | | **ಒಟ್ಟು** | **20.00** |

(ಇಪ್ಪತ್ತು ಕೋಟಿ ರೂಪಾಯಿಗಳು ಮಾತ್ರ)

ಮೇಲ್ಕಂಡ ಅನುದಾನವನ್ನು ಖಜಾನೆ ಲೆಕ್ಕ ಶೀರ್ಷಿಕೆಯಾದ 2054–00–095–0–01 ಯೋಜನೇತರ "125" ಖಜಾನೆ ಆಧುನೀಕರಣರಡಿಯಲ್ಲಿ ನೇರವಾಗಿ ಮೇಲ್ಕಂಡ ಇಲಾಖೆಯ ಅಧಿಕಾರಿಗಳಿಗೆ ಅವರ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಯವರಿಗೆ ನೀಡಲಾಗಿರುವ ಕೋಡ್‌ಗೆ (ಡಿ.ಡಿ.ಓ. ಕೋಡ್) ಖಜಾನೆ ನಿರ್ದೇಶಕರು, ಅಪ್‌ಲೋಡ್ ಮಾಡುವುದು.

ಖಜಾನೆ ನಿರ್ದೇಶಕರು ಸದರಿ ಲೆಕ್ಕ ಶೀರ್ಷಿಕೆಗೆ ಅಪ್‌ಲೋಡ್ ಮಾಡಲ್ಪಟ್ಟ ಮೊಬಲಗನ್ನು ಬೇಡಿಕೆ ಅನುಸಾರ ಸಾದಿಲ್ವಾರು ಬಿಲ್ಲಿನಲ್ಲಿ ನಗದೀಕರಿಸಿ ವೆಚ್ಚ ಮಾಡಲು ಲೋಕೋಪಯೋಗಿ ಇಲಾಖೆ ಅಧಿಕಾರಿಗಳಿಗೆ ಪ್ರಾಧಿಕಾರ ನೀಡಲಾಗಿದೆ. ಲೋಕೋಪಯೋಗಿ ಇಲಾಖೆ ಅಧಿಕಾರಿಗಳು ಹಣ ಸೆಳೆಯುವ ಮುಂಚಿತವಾಗಿ ಸಂಬಂಧಪಟ್ಟ ಖಜಾನೆ ಅಧಿಕಾರಿಗಳಿಂದ ಕಾಮಗಾರಿ ಕಾರ್ಯ ಮುಕ್ತಾಯಗೊಂಡಿರುವ ಬಗ್ಗೆ ದೃಢೀಕರಣ ಪತ್ರ ಪಡೆದು ನಂತರ ಹಣ ಸೆಳೆಯುವುದು.

ಖಜಾನೆ ಅಧಿಕಾರಿಗಳು ದೃಢೀಕರಣ ನೀಡುವ ಮುಂಚಿತವಾಗಿ ಒದಗಿಸಲಾಗಿರುವ ನಕ್ಷೆ ಮತ್ತು ಅಂದಾಜುಪಟ್ಟಿ ಅನುಸಾರವಾಗಿ ಪರಿಶೀಲಿಸಿ ತಾಂತ್ರಿಕ ಸಲಹೆಯ ಅವಶ್ಯವಿದ್ದಲ್ಲಿ ಸ್ಥಳೀಯವಾಗಿ (ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳನ್ನು ಹೊರತುಪಡಿಸಿ) ತಾಂತ್ರಿಕ ಸಲಹೆಗಾರರಿಂದ ಸಲಹೆ ಪಡೆದು ನಂತರ ದೃಢೀಕರಣ ನೀಡಲು ಸೂಚಿಸಿದೆ.

ಕಾಮಗಾರಿ ಪ್ರಾರಂಭವಾದ ನಂತರ ಮುಖ್ಯ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ದಕ್ಷಿಣ ಮತ್ತು ಉತ್ತರ ವಲಯ) ಇವರು ತಮ್ಮ ಅಧೀನ ಅಧಿಕಾರಿಗಳಿಂದ ಪ್ರತಿ ವಾರಕ್ಕೊಮ್ಮೆ ಕಾಮಗಾರಿ ಪ್ರಗತಿ ವರದಿಯನ್ನು ಹಾಗೂ ವೆಚ್ಚ ವಿವರವನ್ನು ಒಳಗೊಂಡಂತೆ ವರದಿಯನ್ನು ಸಿದ್ದಪಡಿಸಿ ಖಜಾನೆ ನಿರ್ದೇಶಕರು ಹಾಗೂ ಯೋಜನಾ ನಿರ್ದೇಶಕರು (ಖಜಾನೆ–2) ಇವರಿಗೆ ತಪ್ಪದೇ ನೀಡತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

PR. 141

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ರಾಜಭಾಷಾ (ವಿಧಾಯೀ) ಆಯೋಗವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : 52 ಭಾನಿವಿ 2009, ದಿನಾಂಕ : 14–12–2009.
2. ಸರ್ಕಾರಿ ಆದೇಶ ಸಂಖ್ಯೆ : 50 ಭಾನಿನಿ 2012, ದಿನಾಂಕ : 02–02–2013.
3. ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 111 ಶಿಸಾಸೇ 2013, ದಿನಾಂಕ : 22–05–2013.
4. ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರ ಟಿಪ್ಪಣಿ ಸಂಖ್ಯೆ : ಕಾನ್ಯಾಮಾ ಸಂಶಾಪಸ/ಕಡತ/89/2013, ದಿನಾಂಕ : 06–11–2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜಭಾಷಾ (ವಿಧಾಯೀ) ಆಯೋಗವನ್ನು ಪುನರ್ ರಚಿಸಿ ದಿನಾಂಕ : 07–12–2012 ರವರೆಗೆ ಮುಂದುವರೆಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗವನ್ನು ಮೂರು ವರ್ಷಗಳವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಪುನರ್ ರಚಿಸಿ ಮುಂದುವರೆಸಲಾಗಿತ್ತು.

ನೂತನ ಸರ್ಕಾರ ಅಸ್ಥಿತ್ವಕ್ಕೆ ಬಂದ ಹಿನ್ನೆಲೆಯಲ್ಲಿ ಸರ್ಕಾರದಿಂದ ನೇಮಿಸಲಾದ ನಿಗಮ ಮಂಡಳಿಗಳ ಅಧ್ಯಕ್ಷರು ಉಪಾಧ್ಯಕ್ಷರು ಮತ್ತು ನಿರ್ದೇಶಕರನ್ನು ಮುಂದುವರಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಬಂದಿರುವುದರಿಂದ, ಈ ಆದೇಶ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಂವ್ಯಶಾಇ 50 ಭಾನಿವಿ 2012, ಬೆಂಗಳೂರು, ದಿನಾಂಕ : 01–01–2014.**

ರಾಜ ಭಾಷಾ (ವಿಧಾಯೀ) ಆಯೋಗವನ್ನು ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ನಮೂದಿಸಿರುವ ಅವಧಿಯವರೆಗೆ ಮುಂದುವರೆಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಬಿ. ಚೆಂಗಪ್ಪ**
ಸರ್ಕಾರದ ಕಾರ್ಯದರ್ಶಿ (ಪ್ರ),
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

PR 118

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2013–14ನೇ ಮುಂಗಾರು ಋತುವಿಗೆ ಲೆವಿ ಅಕ್ಕಿಯ ಸಂಗ್ರಹಣಾ ಗುರಿಯನ್ನು 5 ಲಕ್ಷ ಮೆ.ಟನ್‌ನಿಂದ 2.5 ಲಕ್ಷ ಮೆ.ಟನ್‌ಗೆ ಕಡಿಮೆಗೊಳಿಸುವ ಬಗ್ಗೆ

**ಪ್ರಸ್ತಾವನೆ :**

ಈ ಹಿಂದೆ ಮುಂಗಾರು ಋತುವಿಗೆ ಲೆವಿ ಅಕ್ಕಿ ಸಂಗ್ರಹಣಾ ಗುರಿಯನ್ನು 5 ಲಕ್ಷ ಮೆ.ಟನ್‌ಗೆ ಪ್ರತಿ ಕ್ವಿಂಟಾಲ್‌ಗೆ ರೂ. 2,400/–ರಂತೆ ನಿಗದಿಪಡಿಸಲಾಗಿತ್ತು. ರಾಜ್ಯ ಅಕ್ಕಿ ಗಿರಣಿ ಸಂಘವು ರಾಜ್ಯ ಸರ್ಕಾರವು ನಿಗದಿಪಡಿಸಿರುವ ಲೆವಿ ಅಕ್ಕಿ ಸಂಗ್ರಹಣಾ ಗುರಿಯನ್ನು ಕಡಿಮೆಗೊಳಿಸಬೇಕೆಂದು ಸರ್ಕಾರಕ್ಕೆ ಮನವಿ ಸಲ್ಲಿಸಿದ್ದರ ಹಿನ್ನೆಲೆಯಲ್ಲಿ ಮಾನ್ಯ ಕಾನೂನು, ನ್ಯಾಯ, ಮಾನವ ಹಕ್ಕುಗಳು ಮತ್ತು ಪಶುಸಂಗೋಪನಾ ಸಚಿವರ ಅಧ್ಯಕ್ಷತೆಯಲ್ಲಿ ಮಾನ್ಯ ಸಹಕಾರ ಸಚಿವರು, ಮಾನ್ಯ ಕೃಷಿ ಮಾರುಕಟ್ಟೆ ಮತ್ತು ತೋಟಗಾರಿಕೆ ಸಚಿವರು, ಮಾನ್ಯ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ರಾಜ್ಯ ಸಚಿವರು ಹಾಗೂ ಅಕ್ಕಿ ಗಿರಣಿಗಳ ಮಾಲೀಕರ ಉಪಸ್ಥಿತಿಯಲ್ಲಿ ದಿನಾಂಕ: 18–12–2013ರಂದು ನಡೆದ ಉನ್ನತ ಮಟ್ಟದ ಸಭೆಯಲ್ಲಿ ದೀರ್ಘ ಸಮಾಲೋಚನೆಯ ನಂತರ 2013–14ನೇ ಮುಂಗಾರು ಋತುವಿಗೆ ಲೆವಿ ಅಕ್ಕಿ ಸಂಗ್ರಹಣಾ ಗುರಿಯನ್ನು 5 ಲಕ್ಷ ಮೆ.ಟನ್‌ನಿಂದ 2.5 ಲಕ್ಷ ಮೆ.ಟನ್‌ಗೆ ಕಡಿಮೆಗೊಳಿಸಲು ಹಾಗೂ ಅಕ್ಕಿ ಗಿರಣಿಗಳು ಪ್ರತಿ ಕ್ವಿಂಟಾಲ್‌ಗೆ ರೂ. 2,400/– ರಂತೆ ಮಾರ್ಚ್ 2014ರ ಅಂತ್ಯದವರೆವಿಗೆ 1.5 ಲಕ್ಷ ಮೆ.ಟನ್ ಅಕ್ಕಿಯನ್ನು ಹಾಗೂ ಇನ್ನುಳಿದ 1 ಲಕ್ಷ ಮೆ.ಟನ್ ಅಕ್ಕಿಯನ್ನು ಏಪ್ರಿಲ್ 2014ರಿಂದ ಸರಬರಾಜು ಮಾಡಲು ತೀರ್ಮಾನಿಸಲಾಯಿತು.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 19 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ: 08ನೇ ಜನವರಿ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2013–14ನೇ ಸಾಲಿನ ಮುಂಗಾರು ಋತುವಿಗೆ ಲೆವಿ ಅಕ್ಕಿ ಸಂಗ್ರಹಣಾ ಗುರಿಯನ್ನು 5 ಲಕ್ಷ ಮೆ.ಟನ್‌ನಿಂದ 2.5 ಲಕ್ಷ ಮೆ.ಟನ್‌ಗೆ ಕಡಿಮೆಗೊಳಿಸಿ ಪ್ರತಿ ಕ್ವಿಂಟಾಲ್‌ಗೆ ರೂ. 2,400/– ರಂತೆ ನಿಗದಿಗೊಳಿಸಿ ಆದೇಶಿಸಿದೆ ಹಾಗೂ ಮಾರ್ಚ್ 2014ರ ಅಂತ್ಯದವರೆವಿಗೂ 1.5 ಲಕ್ಷ ಮೆ.ಟನ್ ಅಕ್ಕಿಯನ್ನು ಮತ್ತು ಇನ್ನುಳಿದ 1 ಲಕ್ಷ ಮೆ.ಟನ್ ಅಕ್ಕಿಯನ್ನು ಏಪ್ರಿಲ್ 2014ರಿಂದ (ಒಟ್ಟು 2.5 ಲಕ್ಷ ಮೆ.ಟನ್ ಅಕ್ಕಿಯನ್ನು ಮಾತ್ರ) ಪ್ರತಿ ಕ್ವಿಂಟಾಲ್‌ಗೆ ರೂ. 2,400/– ರಂತೆ ಅಕ್ಕಿ ಗಿರಣಿಗಳಿಂದ ಪಡೆಯಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

**P.R. 99**

**SC - 200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 'ಅನ್ನಭಾಗ್ಯ' ಯೋಜನೆಯಡಿಯಲ್ಲಿ ಪಡಿತರ ಚೀಟಿದಾರರಿಗೆ ಪರಿಷ್ಕೃತ ಪ್ರಮಾಣದಲ್ಲಿ ಗೋಧಿ ವಿತರಣೆ ಬಗ್ಗೆ

**ಓದಲಾಗಿದೆ :** ಆಯುಕ್ತರು, ಆನಾಸ ಇವರ ಪತ್ರ ಸಂಖ್ಯೆ: ಸಿಎಫ್‌ಎಸ್/ಪಿಡಿ/III/92/2010–11, ದಿನಾಂಕ: 13–11–2013

**ಪ್ರಸ್ತಾವನೆ :**

ಜುಲೈ–2013ರಲ್ಲಿ "ಅನ್ನಭಾಗ್ಯ" ಯೋಜನೆ ಜಾರಿಗೊಂಡ ನಂತರದಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸುವ ಗೋಧಿಯ ಪ್ರಮಾಣ ಹೆಚ್ಚಿಸುವಂತೆ ಪಡಿತರ ಚೀಟಿದಾರರಿಂದ ಬೇಡಿಕೆ ಇರುತ್ತದೆ. ಪ್ರಸ್ತುತ ರಾಜ್ಯದ ಉತ್ತರ ಕರ್ನಾಟಕ ಭಾಗದ 13 ಜಿಲ್ಲೆಗಳಲ್ಲಿನ ಏಕ ಸದಸ್ಯ ಹೊಂದಿರುವ ಕುಟುಂಬಕ್ಕೆ 2 ಕೆ.ಜಿ. ಗೋಧಿ, ದ್ವಿಸದಸ್ಯವುಳ್ಳ ಕುಟುಂಬಕ್ಕೆ 3 ಕೆ.ಜಿ. ಗೋಧಿ ಹಾಗೂ ಮೂವರು ಮತ್ತು ಅದಕ್ಕಿಂತ ಹೆಚ್ಚು ಸದಸ್ಯರನ್ನು ಹೊಂದಿರುವ ಕುಟುಂಬಕ್ಕೆ 5 ಕೆ.ಜಿ. ಪ್ರಮಾಣದಲ್ಲಿ ಗೋಧಿಯನ್ನು ವಿತರಿಸಲಾಗುತ್ತಿದೆ. ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಸದರಿ ಗೋಧಿಯ ವಿತರಣೆ ಪ್ರಮಾಣವನ್ನು ದ್ವಿಗುಣಗೊಳಿಸಿ ಅಂದರೆ ಕ್ರಮವಾಗಿ 2 ಕೆ.ಜಿ.ಯಿಂದ 4 ಕೆ.ಜಿ., 3 ಕೆ.ಜಿ.ಯಿಂದ 6 ಕೆ.ಜಿ. ಮತ್ತು 5 ಕೆ.ಜಿ.ಯಿಂದ 10 ಕೆ.ಜಿ.ಗಳಂತೆ, ಮೇಲ್ಕಂಡ ಉತ್ತರ ಕರ್ನಾಟಕದ 13 ಜಿಲ್ಲೆಗಳಿಗೆ ವಿತರಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಅದೇ ರೀತಿ ದಕ್ಷಿಣ ಕರ್ನಾಟಕದ ಭಾಗದ 17 ಜಿಲ್ಲೆಗಳಿಗೆ ಹಾಗೂ ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶ (Informal Rationing Area)ದ ಪಡಿತರ ಚೀಟಿದಾರರಿಂದಲೂ ಸಹ ಪ್ರಸ್ತುತ ವಿತರಿಸುತ್ತಿರುವ ಏಕ ಸದಸ್ಯ ಕುಟುಂಬಕ್ಕೆ 1 ಕಿಲೋ ಗೋಧಿ, 2 ರಿಂದ 3 ಸದಸ್ಯರನ್ನು ಹೊಂದಿರುವ ಕುಟುಂಬಗಳಿಗೆ 2 ಕಿಲೋ ಹಾಗೂ 3 ಮತ್ತು ಅದಕ್ಕಿಂತ ಹೆಚ್ಚು ಸದಸ್ಯ ಕುಟುಂಬಕ್ಕೆ 3 ಕಿಲೋ ಪ್ರಮಾಣವನ್ನು ದ್ವಿಗುಣಗೊಳಿಸುವಂತೆ ಮನವಿ ಬಂದಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 350 ಡಿಆರ್‌ಎ 2013, ಬೆಂಗಳೂರು, ದಿನಾಂಕ: 16ನೇ ಜನವರಿ, 2014**

ಅ) ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಗೋಧಿಯ ಹಾಲಿ ವಿತರಣಾ ಪ್ರಮಾಣವಾದ 2 ಕೆ.ಜಿ., 3 ಕೆ.ಜಿ., 5 ಕೆ.ಜಿ.ಗಳನ್ನು ದ್ವಿಗುಣಗೊಳಿಸಿ 4 ಕೆ.ಜಿ., 6 ಕೆ.ಜಿ. ಮತ್ತು 10 ಕೆ.ಜಿ.ಗಳಂತೆ, ಪ್ರತಿ ಕಾರ್ಡಿಗೆ, ಪ್ರತಿ ಮಾಹೆಗೆ ವಿತರಿಸಲು ಮತ್ತು ದಕ್ಷಿಣ ಕರ್ನಾಟಕದ ಭಾಗದ 17 ಜಿಲ್ಲೆಗಳಲ್ಲಿ 1 ಕೆ.ಜಿ. 2 ಕೆ.ಜಿ. ಮತ್ತು 3 ಕೆ.ಜಿ.ಗಳಂತೆ 2 ಕೆ.ಜಿ. 4 ಕೆ.ಜಿ. ಹಾಗೂ 6 ಕೆ.ಜಿ.ಗಳಂತೆ ಪ್ರತಿ ಕಾರ್ಡಿಗೆ, ಪ್ರತಿ ಮಾಹೆಗೆ ವಿತರಣಾ ಪ್ರಮಾಣವನ್ನು ದ್ವಿಗುಣಗೊಳಿಸಿದೆ.

ಆ) ಅಗತ್ಯವಿರುವ ಹೆಚ್ಚುವರಿ ಗೋಧಿಯನ್ನು ಭಾರತ ಆಹಾರ ನಿಗಮದಿಂದ ಆರ್ಥಿಕ ದರದಲ್ಲಿ (Economic Cost) ಪ್ರತಿ ಕ್ವಿಂಟಾಲ್‌ಗೆ ರೂ. 2,125/–ರ ದರದಲ್ಲಿ ಖರೀದಿಸಲು, ಒಂದು ವೇಳೆ ಭಾರತ ಆಹಾರ ನಿಗಮದಿಂದ ಸರಬರಾಜಿನಲ್ಲಿ ಕೊರತೆಯುಂಟಾದಲ್ಲಿ, ಪ್ರತಿ ಕೆ.ಜಿ.ಗೆ ರೂ. 22/–ರ ದರವನ್ನು ಮೀರದಂತೆ ಮುಕ್ತ ಮಾರುಕಟ್ಟೆಯಿಂದ ಟೆಂಡರ್ ಮೂಲಕ ಖರೀದಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

**P.R. 100**
**SC - 200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2013–14ನೇ ಸಾಲಿನಲ್ಲಿ ಅಕ್ಕಿ ಗಿರಣಿಗಳ ಮೂಲಕ ಲೇವಿ ಅಕ್ಕಿಯನ್ನು ಖರೀದಿಸಿ ಅದನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸಲು ದರ ಪಟ್ಟಿಯನ್ನು ಅನುಮೋದಿಸುವ ಬಗ್ಗೆ

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಆನಾಸನಿನಿ/ಸಂ/ಮಿ.ಪಾ.ಲೆ/2013–14, ದಿನಾಂಕ:

**ಪ್ರಸ್ತಾವನೆ :**

ಮೇಲೆ ಓದಲಾದ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ 2013–14ನೇ ಸಾಲಿನಲ್ಲಿ ಅಕ್ಕಿ ಗಿರಣಿಗಳಿಂದ ಖರೀದಿಸುವ ಲೇವಿ ಅಕ್ಕಿಗೆ ದರವನ್ನು ನಿಗಧಿಪಡಿಸುವಂತೆ ಪ್ರಸ್ತಾಪಿಸಿರುತ್ತಾರೆ.

ಅದರಂತೆ, ಲೇವಿ ಅಕ್ಕಿ ಖರೀದಿ ಹಾಗೂ ಅದರ ನಂತರ ತಗಲುವ ಪ್ರಾಸಂಗಿಕ ವೆಚ್ಚಗಳ ದರಪಟ್ಟಿಯನ್ನು ನಿಗಧಿಪಡಿಸಲು ಸರ್ಕಾರವು ತೀರ್ಮಾನಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 19 ಆರ್‌ಪಿಆರ್ 2013 (ಭಾಗ), ಬೆಂಗಳೂರು, ದಿನಾಂಕ: 04ನೇ ಜನವರಿ, 2014**

ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಣೆ ಮಾಡುವ ಲೇವಿ ಅಕ್ಕಿಯ ದರ ಪಟ್ಟಿಯನ್ನು ಈ ಕೆಳಕಂಡಂತೆ ಅನುಮೋದಿಸಲಾಗಿದೆ.

| ಕ್ರಮ ಸಂಖ್ಯೆ | ವಿವರ | ಕಚ್ಚಾ ಅಕ್ಕಿ ಗ್ರೇಡ್–ಎ ಮತ್ತು ಸಾಮಾನ್ಯ | ಕುಸುಬಲಕ್ಕಿ ಗ್ರೇಡ್–ಎ ಮತ್ತು ಸಾಮಾನ್ಯ |
|---|---|---|---|
| ಅ) | ಅಕ್ಕಿ ಗಿರಣಿಗಳಿಂದ ಖರೀದಿಸುವ ದರ | 2400.00 | 2400.00 |
| ಆ) | ವಿತರಣಾ ವೆಚ್ಚ | | |
| | 1) ಶೇಖರಣಾ ವೆಚ್ಚ (ಪ್ರತಿ ಕ್ವಿಂಟಾಲ್‌ಗೆ) ರೂ. 6.00ರಂತೆ ಮೂರು ತಿಂಗಳಿಗೆ) | 18.00 | 18.00 |
| | 2) ಹ್ಯಾಡ್ಲಿಂಗ್ ವೆಚ್ಚ | 6.40 | 6.40 |
| | 3) ವಿಮಾ ವೆಚ್ಚ (ಪ್ರತಿ ರೂ. 100ಕ್ಕೆ ರೂ. 0.05ರಂತೆ) | 1.20 | 1.20 |
| | 4) ಶೇಖರಣಾ ವಿತರಣೆಯಲ್ಲಿ ಆಗುವ ನಷ್ಟ (ಮೂಲ ದರದ ಶೇ. 0.35 ರಂತೆ) | 8.40 | 8.40 |
| | 5) ಆಡಳಿತಾತ್ಮಕ ವೆಚ್ಚ (ಮೂಲ ದರದ ಶೇ. 2.5ರಂತೆ) | 60.00 | 60.00 |
| | 6) ರಾಜ್ಯ ವಿತರಣಾ ದರ | 2494.00 | 2494.00 |
| | 7) ರಾಜ್ಯ ಸಹಾಯಧನ | 2450.00 | 2450.00 |
| | 8) ಸಗಟು ಲಾಭಾಂಶ | 20.00 | 20.00 |
| | 9) ಸಗಟು ವಿತರಣಾ ದರ | 64.00 | 64.00 |
| | 10) ಚಿಲ್ಲರೆ ಲಾಭಾಂಶ | 36.00 | 36.00 |
| | 11) ಚಿಲ್ಲರೆ ವಿತರಣಾ ದರ | 100.00 | 100.00 |

ಈ ಮೇಲಿನ ವೆಚ್ಚವನ್ನು 2013–14ನೇ ಸಾಲಿನ ಸಹಾಯಧನ ಲೆಕ್ಕ ಶೀರ್ಷಿಕೆ 2408–01–102–0–01–106 (ಯೋಜನೇತರ) ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

**P.R. 102**
**SC - 200**

## ಸಹಕಾರ ಸಚಿವಾಲಯ

**ವಿಷಯ :** ಸಮಾಪನೆಗೊಂಡ ಕಡಬ ಮಹಿಳಾ ವಿವಿದೊದ್ದೇಶ ಸಹಕಾರ ಸಂಘ ನಿ., ಪುತ್ತೂರು ತಾಲ್ಲೂಕು, ಇದರ ಸರ್ಕಾರದ ಪಾಲು ಬಂಡವಾಳ ರೂ. 25,000–00ಗಳನ್ನು ಮನ್ನಾ ಮಾಡುವ ಬಗ್ಗೆ

**ಓದಲಾಗಿದೆ :** ಸಹಕಾರ ಸಂಘಗಳ ಅಪರ ನಿಬಂಧಕರು (ವಸತಿ ಮತ್ತು ಇತರೆ) ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/43/2005–06, ದಿನಾಂಕ: 14–06–2012 ಹಾಗೂ ದಿನಾಂಕ: 19–10–2013

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ಅಪರ ನಿಬಂಧಕರು (ವಸತಿ ಮತ್ತು ಇತರೆ) ಇವರ ಪತ್ರದಲ್ಲಿ ಸಮಾಪನೆಗೊಂಡ ಕಡಬ ಮಹಿಳಾ ವಿವಿದೊದ್ದೇಶ ಸಹಕಾರ ಸಂಘ ನಿ., ಪುತ್ತೂರು ತಾಲ್ಲೂಕು ಇದರ ಸರ್ಕಾರದ ಪಾಲು ಬಂಡವಾಳ ರೂ 25,000–00ಗಳನ್ನು ಮನ್ನಾ ಮಾಡುವಂತೆ ಕೋರಿರುತ್ತಾರೆ.

ಮುಂದುವರೆದು, ಕಡಬ ಮಹಿಳಾ ವಿವಿದೋದ್ದೇಶ ಸಹಕಾರ ಸಂಘವು ದಿನಾಂಕ: 21–01–1999ರಲ್ಲಿ ಸಮಾಪನೆಗೊಂಡಿದ್ದು, ಈ ಅವಧಿಯಲ್ಲಿ ವ್ಯವಹಾರ ಮಾಡಿರುವ ಬಗ್ಗೆ ದಾಖಲೆಗಳು ಲಭ್ಯವಿರುವುದಿಲ್ಲವೆಂದು, ಸಂಘವು ಸ್ವಂತ ಕಟ್ಟಡ ಹೊಂದಿರದ ಕಾರಣ ಇದರ ಅಸ್ತಿತ್ವವು ತಿಳಿದು ಬರುತ್ತಿಲ್ಲವೆಂದು ಹಾಗೂ 2011–12ನೇ ಸಾಲಿನ ಆಡಿಟ್ ವರದಿ ರೀತ್ಯಾ ರೂ. 27,279–00 ನಷ್ಟದಲ್ಲಿರುವುದರಿಂದ ರೂ. 25,000–00ಗಳ ಸರ್ಕಾರದ ಪಾಲು ಬಂಡವಾಳವನ್ನು ಮನ್ನಾ ಮಾಡುವಂತೆ ಕೋರಲಾದ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ಸಹಕಾರ ಸಂಘಗಳ ಅಪರ ನಿಬಂಧಕರು (ವಸತಿ ಮತ್ತು ಇತರೆ) ಇವರು ಸರ್ಕಾರಕ್ಕೆ ಬರೆದಿರುವ ಪತ್ರದಲ್ಲಿ ತಿಳಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 56 ಸಂಮಾಸ 2012, ಬೆಂಗಳೂರು, ದಿನಾಂಕ: 07ನೇ ಜನವರಿ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಮಾಪನೆಗೊಂಡ ಕಡಬ ಮಹಿಳಾ ವಿವಿದೊದ್ದೇಶ ಸಹಕಾರ ಸಂಘ ನಿ., ಪುತ್ತೂರು ತಾಲ್ಲೂಕು ಇದರ ಸರ್ಕಾರಿ ಪಾಲು ಬಂಡವಾಳ ರೂ. 25,000/– (**ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ**) ಮನ್ನಾ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 2002, ದಿನಾಂಕ: 20–01–2003ರ ಹಾಗೂ ಸೇರ್ಪಡೆ ಆದೇಶ ಸಂಖ್ಯೆ: ಎಫ್‌ಡಿ 12 ಟಿಎಫ್‌ಪಿ 2007, ದಿನಾಂಕ: 18–10–2007ರನ್ವಯ ಸರ್ಕಾರದ ಕಾರ್ಯದರ್ಶಿರವರಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಎಸ್. ನಾಗರಾಜಯ್ಯ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**P.R. 128**
**SC - 50**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಶಿವಶರಣ, ಸಿ.ಪಿ.ಸಿ.–67, ಹಟ್ಟಿ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರ ಆದೇಶ ಸಂಖ್ಯೆ : ಸಿಬ್ಬಂದಿ (3) ಇವಿ : 14:03 (ಆದೇಶ ಪುಟ ಸಂಖ್ಯೆ : 255/04–05) ದಿನಾಂಕ : 29–03–2005.
2. ಜಿಲ್ಲಾ ಪೊಲೀಸ್ ಅಧಿಕಾರಿ, ರಾಯಚೂರು ಇವರ ಆದೇಶಗಳ ಸಂಖ್ಯೆ : ಸಿಬ್ಬಂದಿ (3)ಇ.ವಿ./53/2006, (ಓ.ಬಿ. ಸಂಖ್ಯೆ : 1821/2006), ದಿನಾಂಕ : 26–12–2006.
3. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಅಪೀಲು/56/ಈವ/2011–3308 (ಆ.ಪು. ಸಂಖ್ಯೆ : 504/ಈವ/2011) ದಿನಾಂಕ : 08–10–2011.
4. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ :04–02–2012.
5. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)74/2011–12, ದಿನಾಂಕ : 22–05–2012, 31–08–2012, 03–01–2013, 02–02–2013, 06–05–2013.

**ಪ್ರಸ್ತಾವನೆ :**

ಶ್ರೀ ಶಿವಶರಣ, ಸಿ.ಪಿ.ಸಿ.–67, ಹಟ್ಟಿ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ನೇತಾಜಿ ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ : 15–07–2003ರ ರಾತ್ರಿ ಕನ್ನ–ಕಳುವಿನ ಪ್ರಕರಣದಲ್ಲಿ ಇವರು ಭಾಗಿಯಾಗಿದ್ದ ಆಪಾದನೆಯ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ಎಪಿಒ ಶಿವಶರಣ, ಸಿಪಿಸಿ–67, ನೇತಾಜಿನಗರ ಠಾಣೆ, ರಾಯಚೂರುರವರೇ ನೀವು ನೇತಾಜಿನಗರ ಠಾಣಾದಲ್ಲಿ ಪಿ.ಸಿ. ಅಂತಾ ಕೆಲಸ ಮಾಡುತ್ತಿದ್ದಾಗ ದಿನಾಂಕ :15–07–2003ರಂದು ಸಂಶಯಾಸ್ಪದವಾಗಿ ತಿರುಗಾಡುತ್ತಿದ್ದ ಜಯ ಅಲಿಯಾಸ್ ಮೃತ್ಯುಂಜಯ ಹಾಗೂ ಆತನ ಸಹಚರರೊಂದಿಗೆ ನೀವು ಸೇರಿಕೊಂಡು ನೇತಾಜಿನಗರ ಠಾಣಾ ಗುನ್ನೆ ನಂ. 68/03, ಕಲಂ 457–380 ಐಪಿಸಿ ರಲ್ಲಿ ಭಾಗಿ ಆಗಿದ್ದು, ಅಲ್ಲದೇ ಗುಲ್ಬರ್ಗಾ ಜಿಲ್ಲೆಯ ಶಹಾಪೂರ, ಶಹಾಬಾದಗಳಲ್ಲಿ ಕೂಡ ಮನೆ ಬೀಗ ಮುರಿದು ಕಳ್ಳತನ ಮಾಡಿ ಕಳ್ಳತನದ ಮಾಲನ್ನು ಹಂಚಿಕೊಂಡಿದ್ದು, ಪಿ.ಎಸ್.ಐ. ನೇತಾಜಿನಗರರವರು ಕಳ್ಳತನದ ವಸ್ತುಗಳಾದ ಬಂಗಾರದ ಒಡವೆ ಒಟ್ಟು 24.5 ಗ್ರಾಂ ಮತ್ತು ನಗದು ಹಣ ರೂ. 4000–00 ಮತ್ತು ಒಂದು ಕಬ್ಬಿಣದ ರಾಡನ್ನು ನೀವು ನಿಮ್ಮ ಮನೆಯಿಂದ ಪಂಚನಾಮೆ ಮೂಲಕ ಜಪ್ತಿ ಮಾಡಿಕೊಂಡಿದ್ದು ಇರುತ್ತದೆ. ಇದರಿಂದ ನೀವು ಘೋರ ದುರ್ನಡತೆ ಹಾಗೂ ವಿಮುಖತೆಯನ್ನು ತೋರಿಸಿ ಕಳ್ಳತನದಂತಹ ಘೋರ ಅಪರಾಧದಲ್ಲಿ ಶಾಮೀಲಾಗಿದ್ದು ಇರುತ್ತದೆ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 29–03–2005ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಿದ ದಂಡನೆಯನ್ನು ವಿಧಿಸಲಾಗಿದೆ.

ಮೇಲಿನ ದೋಷಾರೋಪಣೆಯಲ್ಲಿ ಆರೋಪಿಸಿದ ಆರೋಪಕ್ಕೆ ಸಂಬಂಧಿಸಿದಂತೆ ದಾಖಲಾಗಿದ್ದ ಮೊ.ಸಂ. 68/03 ಕಲಂ 457–380 ಐಪಿಸಿ ಅಡಿಯಲ್ಲಿನ ಪ್ರಕರಣದಲ್ಲಿ ಸಿ.ಸಿ. ಸಂ. 156/04 ರಲ್ಲಿ ಜೆ.ಎಂ.ಎಫ್.ಸಿ. ಶಹಬಾದ್ ನ್ಯಾಯಾಲಯವು ದಿನಾಂಕ : 21–07–2006 ರಂದು ತೀರ್ಪು ನೀಡಿ, ಆ.ಪೊ.ಅ.ರವರನ್ನು ಅಪರಾಧಿಯೆಂದು ಪರಿಗಣಿಸಿ 2 ವರ್ಷಗಳ ಸಾದಾ ಶಿಕ್ಷೆ ಹಾಗೂ ರೂ. 2,000/–ಗಳ ದಂಡವನ್ನು ವಿಧಿಸಿರುತ್ತದೆ. ನ್ಯಾಯಾಲಯದಿಂದ ದಂಡನೆಗೆ ಒಳಗಾಗಿರುವುದರಿಂದ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 26–12–2006ರ ಆದೇಶದಲ್ಲಿ ಇವರನ್ನು ಸದರಿ ಆದೇಶದ ದಿನಾಂಕದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿರುತ್ತಾರೆ.

ಜೆ.ಎಂ.ಎಫ್.ಸಿ. ನ್ಯಾಯಾಲಯವು ನೀಡಿದ ತೀರ್ಪಿನ ವಿರುದ್ಧ ಸಲ್ಲಿಸಿದ ಮೇಲ್ಮನವಿ ಅರ್ಜಿ ಸಂಖ್ಯೆ : ಸಿಎ 39/2006ರಲ್ಲಿ ಫಾಸ್ಟ್ ಟ್ರ್ಯಾಕ್–III ಗುಲ್ಬರ್ಗಾ ನ್ಯಾಯಾಲಯವು ದಿನಾಂಕ : 10–07–2008ರ ತೀರ್ಪಿನಲ್ಲಿ ಅರ್ಜಿಯನ್ನು ವಜಾಗೊಳಿಸಿ Trail Court ನೀಡಿದ ತೀರ್ಪನ್ನು ದೃಢೀಕರಿಸಿರುತ್ತದೆ.

ಸದರಿಯವರು ನ್ಯಾಯಾಲಯದ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯ, ಸರ್ಕ್ಯೂಟ್ ಬೆಂಚ್ ಗುಲ್ಬರ್ಗಾ, ಇಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಸದರಿ ಮೇಲ್ಮನವಿ ಕ್ರಿಮಿನಲ್ ಅಪೀಲು ಸಂಖ್ಯೆ : 2511/08 ರಲ್ಲಿ ವಿಚಾರಣೆ ನಡೆದು ದಿನಾಂಕ : 01–06–2010 ರಂದು ನ್ಯಾಯಾಲಯದಲ್ಲಿ ಇರುವ ತೀರ್ಪಿನಲ್ಲಿ ಇವರನ್ನು ಬಿಡುಗಡೆಗೊಳಿಸಲಾಗಿದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 4846 ಹೆಚ್‌ಸಿಪಿ–1/2010, ದಿನಾಂಕ : 12–10–2010ರನ್ವಯ ಸದರಿ ತೀರ್ಪಿನ ವಿರುದ್ಧ ಅಪೀಲನ್ನು ಸಲ್ಲಿಸದಿರಲು ತೀರ್ಮಾನಿಸಲಾದ ಹಿನ್ನೆಲೆಯಲ್ಲಿ ಇವರನ್ನು ಪುನಃ ಸೇವೆಗೆ ತೆಗೆದುಕೊಳ್ಳಲು ತೀರ್ಮಾನಿಸಿ, ದಿನಾಂಕ : 28–02–2011ರ ಆದೇಶದಲ್ಲಿ ಇವರನ್ನು ಪುನಃ ಸೇವೆಗೆ ತೆಗೆದುಕೊಳ್ಳಲಾಗಿದೆ ಹಾಗೂ ದಿನಾಂಕ : 07–01–2007 ರಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ವರೆಗಿನ ಅವಧಿಯನ್ನು (ಸೇವೆಯ ಹೊರಗಿದ್ದ) Dies-non ಎಂದು ಪರಿಗಣಿಸಿ ಆದೇಶಿಸಿದೆ.

ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರದ ಆದೇಶಗಳನ್ನು ರದ್ದುಪಡಿಸುವಂತೆ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ : 08–10–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಸಲ್ಲಿಸಿರುತ್ತಾರೆ.

ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ ಇಲಾಖಾ ವಿಚಾರಣೆ ಹಾಗೂ ಕ್ರಿಮಿನಲ್ ಮೊಕದ್ದಮೆಗಳು ಪ್ರತ್ಯೇಕ ಪ್ರಕರಣಗಳಾಗಿರುವುದರಿಂದ ಇಲಾಖಾ ವಿಚಾರಣೆಯಲ್ಲಿ ತೆಗೆದುಕೊಂಡ ಸಾಕ್ಷ್ಯಾಧಾರಗಳ ಆಧಾರದ ಮೇಲೆ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಪರಿಷ್ಕರಿಸಲು ಯಾವುದೇ ಸಮರ್ಥನೀಯ ಅಂಶಗಳು ಇರದ ಕಾರಣ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 14 ಪೊಸಿಅ 2012, ಬೆಂಗಳೂರು, ದಿನಾಂಕ : 04–12–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಶರಣ, ಸಿ.ಪಿ.ಸಿ.–67, ಹಟ್ಟಿ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**P.R. 51**

**SC - 30**

## ಕಾರ್ಮಿಕ ಸಚಿವಾಲಯ

**ವಿಷಯ** : ಶ್ರೀ ಉಮೇಶ್ ವಿ. ಪಾಟೀಲ್, ಕಿರಿಯ ತರಬೇತಿ ಅಧಿಕಾರಿ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಸವದತ್ತಿ ಇವರಿಗೆ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ಲೋಕಾಯುಕ್ತ ಟ್ರಾಪ್ಡ್ ಪ್ರಕರಣದಲ್ಲಿ ವಿಧಿಸಿರುವ ದಂಡನೆಯನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ :**

1. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಆದೇಶ ಸಂಖ್ಯೆ : ಉತಇ/ತರಬೇತಿ/ಆಡಳಿತ–1/ ವಿವ–34/08–09, ದಿನಾಂಕ : 03–10–2011.
2. ಉಪ ನಿಬಂಧಕರು, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಡಿ.ಓ. ಸಂಖ್ಯೆ : ಕಂಪ್ಲೇಂಟ್/ ಉಪಲೋಕ್/ಜಿಬಿಎಂ/367/2009/ಡಿಆರ್ಇ–5, ದಿನಾಂಕ : 05–05–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಆದೇಶದಲ್ಲಿ ಶ್ರೀ ಉಮೇಶ್ ವಿ. ಪಾಟೀಲ್, ಕಿರಿಯ ತರಬೇತಿ ಅಧಿಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಹುಬ್ಬಳ್ಳಿ ಇವರು ಸವದತ್ತಿ ಕೈಗಾರಿಕಾ ತರಬೇತಿ ಸಂಸ್ಥೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ : 16–07–2008ರಂದು ಫಿರ್ಯಾದುಧಾರರಾದ ಶ್ರೀ ಶರೀಫಸಾಬ ಫಕುರಸಾಬ ನದಾಫ ಇವರಿಂದ ಲಂಚದ ಹಣ ರೂ. 4500.00 ಗಳನ್ನು ಸ್ವೀಕರಿಸುತ್ತಿದ್ದಾಗ ಹಣದೊಡನೆ ಸಿಕ್ಕಿಬಿದ್ದಿದ್ದು, ಇದು ರಾಸಾಯನಿಕ ಪರೀಕ್ಷೆಯಿಂದ ರುಜುವಾತಾಗಿರುತ್ತದೆ. ಆದ್ದರಿಂದ ಇವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲುನೋಟಕ್ಕೆ ಸಾಬೀತಾಗಿ, ಲೋಕಾಯುಕ್ತ ಪೊಲೀಸರಿಂದ ದಸ್ತಗಿರಿ ಆಗಿದ್ದು, ಈ ಹಿನ್ನೆಲೆಯಲ್ಲಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ, ಹುಬ್ಬಳ್ಳಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಲೀನ್ ಬದಲಾಯಿಸಲಾಯಿತು.

ಮೇಲ್ಕಂಡ ಹಿನ್ನೆಲೆಯಲ್ಲಿ ದಿನಾಂಕ : 27–02–2009 ರಂದು ದೋಷಾರೋಪಣೆ ಪಟ್ಟಿ ಜಾರಿ ಮಾಡಿ, ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲಾಗಿ, ವಿಚಾರಣೆಯಲ್ಲಿ ಶ್ರೀ ಉಮೇಶ್ ವಿ. ಪಾಟೀಲ್, ಕಿರಿಯ ತರಬೇತಿ ಅಧಿಕಾರಿ ಇವರು ಸಂಸ್ಥೆಯಲ್ಲಿ 2ನೇ ವರ್ಷದ ವಿದ್ಯಾರ್ಥಿಯಾಗಿ ವ್ಯಾಸಂಗ ಮಾಡುತ್ತಿರುವ ಶ್ರೀ ಮಕ್ತುಮಸಾಬ ಇವರನ್ನು ಪರೀಕ್ಷೆಯಲ್ಲಿ ಪಾಸು ಮಾಡುವುದಾಗಿ ತಿಳಿಸಿ ರೂ. 5,500/–ಗಳ ಲಂಚಕ್ಕೆ ಒತ್ತಾಯಿಸಿದ್ದು, ಅದರಲ್ಲಿ ರೂ. 1000/–ಗಳನ್ನು ಹಿಂದೆಯೇ ಪಡೆದಿದ್ದು, ಉಳಿದ ಲಂಚದ ಹಣ ರೂ. 4,500/–ಗಳನ್ನು ಫಿರ್ಯಾದುಧಾರರಾದ ಶ್ರೀ ಶರೀಫಸಾಬ ಫಕುರಸಾಬ ನದಾಫ ಇವರಿಂದ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಸಿಕ್ಕಬಿದ್ದಿರುವುದು ರಾಸಾಯನಿಕ ಪರೀಕ್ಷೆಯಿಂದ ಹಾಗೂ ಸಾಕ್ಷಿದಾರರ ಹೇಳಿಕೆಯಿಂದ ಸಾಬೀತಾಗಿರುತ್ತದೆ. ಹಾಗೂ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ರೂ. 5,500/–ಗಳನ್ನು ಲಂಚವನ್ನಾಗಿ ಪಡೆದಿರುವ ಬಗ್ಗೆ ಆರೋಪಿತ ನೌಕರರೇ ಲಿಖಿತ ಮೂಲಕ ಬರೆದುಕೊಟ್ಟಿರುವುದು, ಇಲಾಖಾ ವಿಚಾರಣೆಯ ಸಮಯದಲ್ಲಿಯೂ ರುಜುವಾತಾಗಿರುವುದಾಗಿ ವರದಿ ನೀಡಲಾಗಿದೆ. ವರದಿಯನ್ವಯ ನೌಕರರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿ ಸದರಿ ನೋಟೀಸ್‌ಗೆ ನೌಕರರು ಸಲ್ಲಿಸಿರುವ ವಿವರಣೆಯ ಸಮಂಜಸವಾಗಿರುವುದಿಲ್ಲ.

ವಿಚಾರಣಾಧಿಕಾರಿಗಳಾದ ಶ್ರೀ ನೂರುದ್ದೀನ್, ಜಂಟಿ ನಿರ್ದೇಶಕರು, ವಿಭಾಗೀಯ ಕಛೇರಿ, ಹುಬ್ಬಳ್ಳಿ ಇವರು ನೀಡಿರುವ ವರದಿಗಳನ್ನು ಪರಿಶೀಲಿಸಿ, ಶ್ರೀ ಉಮೇಶ್ ವಿ ಪಾಟೀಲ್, ಕಿರಿಯ ತರಬೇತಿ ಅಧಿಕಾರಿ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಹುಬ್ಬಳ್ಳಿ ಇವರ ವರ್ತನೆಯು ಆಶಿಸ್ತಿನಿಂದ ಕೂಡಿದ್ದು ಶಿಕ್ಷಾರ್ಹವಾಗಿದ್ದು, ದಂಡನೆಯನ್ನು ವಿಧಿಸಲು ತೀರ್ಮಾನಿಸಿ, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) 1957ರಲ್ಲಿ ಷೆಡ್ಯೂಲ್ 'ಬಿ' ಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಾಗರೀಕ ಸೇವೆ (ಸಿ.ಸಿ.ಎ) ನಿಯಮ 8(iii) ರಂತೆ ಸಂಚಿತ ಪರಿಣಾಮ ಸಹಿತ ಒಂದು ವಾರ್ಷಿಕ ಬಡ್ತಿಯನ್ನು ತಡೆಹಿಡಿದು ದಂಡನೆಯನ್ನು ವಿಧಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಉಪ ನಿಬಂಧಕರು, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ ಇವರ ಅರೆ ಸರ್ಕಾರಿ ಪತ್ರದಲ್ಲಿ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಮೇಲೆ (1)ರಲ್ಲಿ ಓದಲಾದ ಆದೇಶವನ್ನು ಉಲ್ಲೇಖಿಸುತ್ತಾ, ಶ್ರೀ ಉಮೇಶ್ ವಿ. ಪಾಟೀಲ್, ಕಿರಿಯ ತರಬೇತಿ ಅಧಿಕಾರಿ, ಸವದತ್ತಿ, ಇವರು ಶ್ರೀ ಶರೀಫಸಾಬ ಫಕುರಸಾಬ ನದಾಫ ಇವರಿಂದ ಲಂಚವನ್ನು ಕೇಳಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸ್, ಬೆಳಗಾಂ ಇವರ ಕೈಗೆ ದಿ : 16–7–08 ರಂದು ಸಿಕ್ಕಿಬಿದ್ದ ಮೇರೆಗೆ, ಅವರ ವಿರುದ್ಧ ತನಿಖೆ ಮಾಡಿದ ದಾಖಲಾತಿಗಳೊಂದಿಗೆ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ನೀಡಿದ ವರದಿಯ ಮೇರೆಗೆ, ಶ್ರೀ ಉಮೇಶ್ ವಿ. ಪಾಟೀಲ್, ಕಿರಿಯ ತರಬೇತಿ ಅಧಿಕಾರಿ, ಸವದತ್ತಿಯವರ ಮೇಲೆ ಪ್ರಕರಣ ದಾಖಲು ಮಾಡಿಕೊಂಡು ಅವರಿಗೆ ಅವರ ದುರ್ವತನೆ/ದುರ್ನಡತೆ ಬಗ್ಗೆ ಸಮೀಕ್ಷಣಾ ವರದಿಯನ್ನು ಕಳುಹಿಸಿ ಅವರಿಂದ ಉತ್ತರ ಕೋರಲಾಗಿ, ಅವರು ತಮ್ಮ ಉತ್ತರದಲ್ಲಿ ತನ್ನ ಮೇಲಿನ ಶಿಸ್ತು ಪ್ರಾಧಿಕಾರಿಯವರು ಈಗಾಗಲೇ ವಿಚಾರಣೆಗಾಗಿ ತನಿಖಾಧಿಕಾರಿಯವರನ್ನು ನೇಮಿಸಿದ್ದು, ತನಿಖಾಧಿಕಾರಿಯವರು ತನಿಖೆ ಮಾಡಿ ವರದಿಯನ್ನು ಆಯುಕ್ತರಿಗೆ ಸಲ್ಲಿಸಿದ್ದು, ಅವರ ಬಳಿ ದಂಡನೆ ವಿಧಿಸುವುದಕ್ಕಾಗಿ ಇದೆ ಎಂದು ಹೇಳಿದ ನಂತರ, ಆಯುಕ್ತರು, ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಪತ್ರ ಬರೆದು ತನಿಖಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯ ಮೇಲೆ ಮಾಡಿರುವ ಆದೇಶದ ಪ್ರತಿಯನ್ನು ತರಿಸಿ ನೋಡಿದಾಗ, ಆಯುಕ್ತರು, ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಬೆಂಗಳೂರುರವರು, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮ 1957ರ ನಿಯಮ 8(iii) ರಂತೆ ಬರಿ ಸಂಚಿತ ಪರಿಣಾಮದ ಒಂದು ವಾರ್ಷಿಕ ಬಡ್ತಿಯನ್ನು ತಡೆಹಿಡಿದು ದಂಡನೆ ವಿಧಿಸಿ ಆದೇಶಿಸಿರುತ್ತಾರೆ. ಆದರೆ, ಗಂಭೀರವಾದ ದುರ್ನಡತೆ ಅಥವಾ ದುರ್ವತನೆಯಾದಾಗ ಅಂದರೆ ಲಂಚ ತೆಗೆದುಕೊಳ್ಳುವುದಾಗಲಿ ಅಥವಾ ಅದರ ಸಲುವಾಗಿ ದುರ್ವರ್ತನೆಯಿಂದ ನಡೆದುಕೊಂಡಾಗ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 8(vi) ರಿಂದ (viii) ರಲ್ಲಿ ಉಲ್ಲೇಖಿಸಿದ ಯಾವುದಾದರೊಂದು ದಂಡನೆಯನ್ನು ವಿಧಿಸಬೇಕಾಗಿರುವುದು ಕಡ್ಡಾಯವಿದೆ ಮತ್ತು ವಿಶೇಷ ಕಾರಣಗಳನ್ನು ನೀಡದ ಹೊರತು ಆ ದಂಡನೆಗಳಿಗಿಂತ ಕಡಿಮೆ ದಂಡನೆ ವಿಧಿಸಲು ಬರುವುದಿಲ್ಲ. ಆದರೆ, ದಂಡನಾಧಿಕಾರಿಯವರು ಹಾಗೆ ಮಾಡದೆ ಇರುವುದು ಸ್ಪಷ್ಟವಿದೆ. ಹಾಗೆ ಕಡಿಮೆ ದಂಡನೆ ವಿಧಿಸಿರುವುದು ನಿಯಮಗಳಡಿಯಲ್ಲಿ ಸಮಂಜಸವಾಗಿರುವುದಿಲ್ಲ. ಆದುದರಿಂದ, ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 26 ರಡಿಯಲ್ಲಿ ತನಿಖಾ ವರದಿ ಮತ್ತು ನೀಡಿರುವ ದಂಡನೆಯನ್ನು ಪರಿಶೀಲಿಸಿ ಶ್ರೀ ಉಮೇಶ್ ವಿ. ಪಾಟೀಲ್ ಇವರಿಗೆ ನೀಡಿರುವ ಅತಿ ಕಡಿಮೆ ದಂಡನೆಯನ್ನು ಮಾರ್ಪಡಿಸಿ, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 8(vi) ರಿಂದ (viii) ರಲ್ಲಿ ಉಲ್ಲೇಖಿಸಿದ ಯಾವುದಾದರೊಂದು ದಂಡನೆಯನ್ನು ವಿಧಿಸಬೇಕೆಂದು ಮಾನ್ಯ ಉಪಲೋಕಯುಕ್ತ–1 ರವರು ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು ಷೆಡ್ಯೂಲ್–II ರಲ್ಲಿ ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರವು ಈ ಪ್ರಕರಣದ ಬಗೆಗಿನ ಎಲ್ಲಾ ದಾಖಲೆಗಳನ್ನು ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರಿಂದ ಪಡೆದು ಪರಿಶೀಲಿಸಲಾಗಿ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ದಿನಾಂಕ : 03–10–2011ರ ಆದೇಶದಲ್ಲಿ ಶ್ರೀ ಉಮೇಶ ವಿ. ಪಾಟೀಲ್ ಇವರಿಗೆ ವಿಧಿಸಿರುವ ಸಂಚಿತ ಪರಿಣಾಮ ಸಹಿತ ಒಂದು ವಾರ್ಷಿಕ ಬಡ್ತಿಯನ್ನು ತಡೆಹಿಡಿಯುವ ದಂಡನಾದೇಶವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿ 26ರಡಿ ಮಾರ್ಪಡಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii)ರ ಅಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಾಇ 146 ಇಟಿಐ 2012, ಬೆಂಗಳೂರು, ದಿನಾಂಕ : 22-10-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಉಮೇಶ್ ವಿ. ಪಾಟೀಲ್, ಕಿರಿಯ ತರಬೇತಿ ಅಧಿಕಾರಿ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಸವದತ್ತಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಂಭವಿಸಿದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಬಗ್ಗೆ ಸದರಿಯವರಿಗೆ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ಆದೇಶ ಸಂಖ್ಯೆ : ಉತಇ/ತರಬೇತಿ/ಆಡಳಿತ-1/ವಿವ-34/08-09, ದಿನಾಂಕ : 03-10-2011ರಲ್ಲಿ ವಿಧಿಸಿರುವ ಸಂಚಿತ ಪರಿಣಾಮ ಸಹಿತ ಒಂದು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವ ದಂಡನಾದೇಶವನ್ನು ಮಾರ್ಪಡಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿ 26ರಡಿ ಸರ್ಕಾರಕ್ಕೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಉಮೇಶ್. ವಿ. ಪಾಟೀಲ್, ಕಿರಿಯ ತರಬೇತಿ ಅಧಿಕಾರಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿ 8(viii) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ನಾಗರಾಜ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

**P.R. 115**

**SC - 50**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವಾಲಯ

**ವಿಷಯ :** ಪ್ರಸ್ತುತ ಅಸ್ತಿತ್ವದಲ್ಲಿರುವ ಜಿಲ್ಲಾಮಟ್ಟದ ಮಕ್ಕಳ ಕಲ್ಯಾಣ ಸಮಿತಿ ಹಾಗೂ ಬಾಲನ್ಯಾಯ ಮಂಡಳಿಗಳ ಕಾಲಾವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :**

1. ಆದೇಶ ಸಂಖ್ಯೆ : ಮಮಇ 206 ಮಭಾಬ 2010, ದಿನಾಂಕ : 13-10-2010.
2. ಆದೇಶ ಸಂಖ್ಯೆ : ಮಮಇ 206 ಮಭಾಬ 2010, ದಿನಾಂಕ : 14-10-2010.
3. ಆದೇಶ ಸಂಖ್ಯೆ : ಮಮಇ 221 ಮಭಾಬ 2013, ದಿನಾಂಕ : 09-10-2013.
4. ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿ ಇವರ ಪತ್ರ ಸಂ. ಕೆ.ಎಸ್.ಐ.ಸಿ.ಪಿ.ಎಸ್/CWC/JJB/ಆ.ಪ್ರ. 30/2012-13, ದಿನಾಂಕ : 28-11-2013.

**ಪ್ರಸ್ತಾವನೆ :**

ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006ರ ಸೆಕ್ಷನ್ 4 ಮತ್ತು 29ರಡಿಯಲ್ಲಿ ಕೆಲವು ಷರತ್ತಿನೊಂದಿಗೆ 28 ಜಿಲ್ಲೆಗಳಲ್ಲಿ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು 3 ವರ್ಷದ ಅವಧಿಗೆ ನಾಮನಿರ್ದೇಶನ ಮಾಡಿ ಮಕ್ಕಳ ಕಲ್ಯಾಣ ಸಮಿತಿಗಳನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿನ ಆದೇಶದಲ್ಲಿ ರಚಿಸಲಾಗಿತ್ತು.

ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006ರ ಸೆಕ್ಷನ್ 4 ಮತ್ತು 29ರಡಿಯಲ್ಲಿ ಕೆಲವು ಷರತ್ತಿನೊಂದಿಗೆ ಯಾದಗಿರಿ ಜಿಲ್ಲೆಯಲ್ಲಿ ಹೊರತುಪಡಿಸಿ 28 ಜಿಲ್ಲೆಗಳ ಬಾಲನ್ಯಾಯ ಮಂಡಳಿಗಳ ಅಧ್ಯಕ್ಷರು ಹಾಗೂ ಸಮಾಜ ಕಾರ್ಯಕರ್ತರನ್ನು 3 ವರ್ಷದ ಅವಧಿಗೆ ನಾಮನಿರ್ದೇಶನ ಮಾಡಿ ಬಾಲನ್ಯಾಯ ಮಂಡಳಿಗಳನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿನ ಆದೇಶದಲ್ಲಿ ರಚಿಸಲಾಗಿತ್ತು.

ದಿನಾಂಕ : 13-10-2010ರಲ್ಲಿ ರಚಿಸಲಾಗಿರುವ ಮಕ್ಕಳ ಕಲ್ಯಾಣ ಸಮಿತಿ ಮತ್ತು ದಿನಾಂಕ : 14-10-2010ರಲ್ಲಿ ರಚಿಸಲಾಗಿರುವ ಬಾಲನ್ಯಾಯ ಮಂಡಳಿಗಳ ಕಾಲಾವಧಿಯು ಕ್ರಮವಾಗಿ ದಿನಾಂಕ : 12-10-2013 ಮತ್ತು 13-10-2013ಕ್ಕೆ ಮುಕ್ತಾಯವಾಗಿದ್ದರಿಂದ ಸದರಿ ಮಕ್ಕಳ ಕಲ್ಯಾಣ ಸಮಿತಿ/ಬಾಲನ್ಯಾಯ ಮಂಡಳಿಗಳ ಕಾಲಾವಧಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳವರೆಗೆ ಅಥವಾ ಮಕ್ಕಳ ಕಲ್ಯಾಣ ಸಮಿತಿ/ಬಾಲನ್ಯಾಯ ಮಂಡಳಿಗಳನ್ನು ಪುನರ್ ರಚಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಮೇಲೆ ಕ್ರಮ ಸಂಖ್ಯೆ (3)ರಲ್ಲಿನ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು.

ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿ ಇವರ ಪತ್ರದಲ್ಲಿ ದಿನಾಂಕ : 09-10-2013ರ ಆದೇಶದಲ್ಲಿ ಮಕ್ಕಳ ಕಲ್ಯಾಣ ಸಮಿತಿ/ಬಾಲನ್ಯಾಯ ಮಂಡಳಿಗಳನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಅಥವಾ ಮಕ್ಕಳ ಕಲ್ಯಾಣ ಸಮಿತಿ/ಬಾಲನ್ಯಾಯ ಮಂಡಳಿಗಳನ್ನು ಪುನರ್ ರಚಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಿದ್ದ ಅವಧಿಯು ದಿನಾಂಕ : 08-01-2014ಕ್ಕೆ ಮುಕ್ತಾಯಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಈವರೆವಿಗೂ ರಾಜ್ಯ ಮಟ್ಟದ ಆಯ್ಕೆ ಸಮಿತಿ ರಚನೆಯಾಗದಿರುವ ಕಾರಣ ಹಾಲಿ ಕಾರ್ಯನಿರ್ವಹಿಸುತ್ತಿರುವ ಮಕ್ಕಳ ಕಲ್ಯಾಣ ಸಮಿತಿ ಮತ್ತು ಬಾಲ ನ್ಯಾಯಮಂಡಳಿಗಳ ಕಾಲಾವಧಿಯನ್ನು ಹೊಸದಾಗಿ ಮಕ್ಕಳ ಕಲ್ಯಾಣ ಸಮಿತಿ ಮತ್ತು ಬಾಲನ್ಯಾಯ ಮಂಡಳಿಗಳನ್ನು ರಚಿಸುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿವರೆಗೆ ಮುಂದುವರೆಸುವಂತೆ ಕೋರಿ ಮೇಲೆ ಕ್ರಮ ಸಂಖ್ಯೆ (4)ರಲ್ಲಿನ ಪತ್ರದಲ್ಲಿ ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ : ಮಮಇ 278 ಮಭಾಬ 2013 (ಭಾಗ-1), ಬೆಂಗಳೂರು, ದಿನಾಂಕ : 09-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006ರ ಸೆಕ್ಷನ್ 4 ಮತ್ತು 29ರಡಿಯಲ್ಲಿ ಆದೇಶ ಸಂಖ್ಯೆ : ಮಮಇ 221 ಮಭಾಬ 2013, ದಿನಾಂಕ : 09-10-2013ರಲ್ಲಿ ಮಕ್ಕಳ ಕಲ್ಯಾಣ ಸಮಿತಿ/ಬಾಲನ್ಯಾಯ ಮಂಡಳಿಗಳನ್ನು ಮುಂದುವರಿಸಲಾದ ಕಾಲಾವಧಿಯು ದಿನಾಂಕ : 08-01-2014ಕ್ಕೆ ಮುಕ್ತಾಯವಾಗಿರುವುರಿಂದ ಸದರಿ ಮಕ್ಕಳ ಕಲ್ಯಾಣ ಸಮಿತಿ/ಬಾಲನ್ಯಾಯ ಮಂಡಳಿಗಳನ್ನು ದಿನಾಂಕ : 09-01-2014 ರಿಂದ ಮುಂದಿನ 3 ತಿಂಗಳವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಜರಳಿ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕ ಸಬಲೀಕರಣ ಇಲಾಖೆ.

**P.R. 117**

**SC - 300**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಭೀಮನಕುಪ್ಪೆ ಗ್ರಾಮದ ಸ.ನಂ. 180 ರಲ್ಲಿ 0–35 ಗುಂಟೆ ಬಿ–ಖರಾಬು ಜಮೀನನ್ನು ಇನ್‌ಸ್ಟಿಟ್ಯೂಟ್ ಫಾರ್ ಹ್ಯೂಮನ್ ಸೆಟ್ಲ್‌ಮೆಂಟ್ ಟ್ರಸ್ಟ್‌ನ ಮದರ್ ಕ್ಯಾಂಪಸ್ ಸ್ಥಾಪಿಸಲು ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 852 ಎಲ್‌ಜಿಬಿ 2009, ದಿನಾಂಕ : 14–05–2010
2. ಸರ್ಕಾರಿ ಆದೇಶ ಸಂಖ್ಯೆ : ನಅಇ 513 ಬೆಂಭೂಸ್ವಾ 2009, ದಿನಾಂಕ : 18–01–2013 & 05–02–2013.
3. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅರೆ ಸರ್ಕಾರಿ ಪತ್ರ ಸಂಖ್ಯೆ: 1242/2011–12, ದಿನಾಂಕ : 30–08–2013.
4. ಜಿಲ್ಲಾಧಿಕಾರಿಗಳು, ಬೆಂಗಳೂರು–ನಗರ ರವರ ಪತ್ರ ಸಂಖ್ಯೆ : ಎಲ್‌ಎನ್‌ಡಿ (ಎಸ್) ಸಿಆರ್ : 178/09–10, ದಿನಾಂಕ : 23–11–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಇನ್‌ಸ್ಟಿಟ್ಯೂಟ್ ಫಾರ್ ಹ್ಯೂಮನ್ ಸೆಟ್ಲ್‌ಮೆಂಟ್ ಟ್ರಸ್ಟ್‌ನ ಮದರ್ ಕ್ಯಾಂಪಸ್ ಸ್ಥಾಪಿಸಲು ಮಾರ್ಗಸೂಚಿ ಬೆಲೆಯ ಶೇಕಡ 50ರಷ್ಟು ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಭೀಮನಕುಪ್ಪೆ ಗ್ರಾಮದ ಸ.ನಂ. 180 ರಲ್ಲಿ ಬ್ಲಾಕ್ ನಂ.13 ರಲ್ಲಿ ಖಾಲಿ ಇರುವ 7.07 ಎ/ಗುಂ. ಜಮೀನನ್ನು ಮಂಜೂರು ಮಾಡಲು ಮತ್ತು ಬ್ಲಾಕ್ ನಂ. 1 ರಿಂದ 7 ವರೆಗಿನ 5–21 ಎ/ಗುಂ. ಜಮೀನನ್ನು ಬಗರ್‌ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯ ಮುಂದೆ ಬಾಕಿ ಇರುವ ಅರ್ಜಿಗಳು ಇತ್ಯರ್ಥವಾದ ನಂತರ ಮಂಜೂರು ಮಾಡಲು ಸರ್ಕಾರವು ಆದೇಶಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ನಗರಾಭಿವೃದ್ಧಿ ಇಲಾಖೆಯ ಸರ್ಕಾರಿ ಆದೇಶದಲ್ಲಿ ಕೆಂಗೇರಿ ಹೋಬಳಿ, ಭೀಮನಕುಪ್ಪೆ ರಾಮಸಾಗರ ಗ್ರಾಮದ ಸ.ನಂ. 2ರಲ್ಲಿ 34–37 ಎ/ಗುಂ ಮತ್ತು ಭೀಮನಕುಪ್ಪೆ ಗ್ರಾಮದ ಸ.ನಂ. 180ರಲ್ಲಿ 0–35 ಗುಂಟೆ, ಸ.ನಂ. 198ರಲ್ಲಿ 03–12 ಎ/ಗುಂ, ಸ.ನಂ. 199ರಲ್ಲಿ 2–20 ಎ/ಗುಂ ಹಾಗೂ ಸ.ನಂ. 200 ರಲ್ಲಿ 5–29 ಎ/ಗುಂ, ಜಮೀನನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ 1976ರ ಕಲಂ 38ಬಿ ರಂತೆ ಸಗಟು ಹಂಚಿಕೆ ಮಾಡಲು ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಇವರು ಕೆಂಗೇರಿ ಹೋಬಳಿ, ಭೀಮನಕುಪ್ಪೆ ಗ್ರಾಮದ ಜಮೀನನ್ನು ಪ್ರಾಧಿಕಾರಕ್ಕೆ ಹಸ್ತಾಂತರಿಸಿದಲ್ಲಿ ಇನ್‌ಸ್ಟಿಟ್ಯೂಟ್ ಫಾರ್ ಹ್ಯೂಮನ್ ಸೆಟ್ಲ್‌ಮೆಂಟ್ ಟ್ರಸ್ಟ್‌ಗೆ ನೀಡಲು ಕ್ರಮಕೈಗೊಳ್ಳಲಾಗುವುದು ಎಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಭೀಮನಕುಪ್ಪೆ ಗ್ರಾಮದ ಸ.ನಂ. 180ರಲ್ಲಿ 2–08 ಎ/ಗುಂ. ಜಮೀನನ್ನು ಈಗಾಗಲೇ ಸಾರ್ವಜನಿಕ ರಸ್ತೆಗಾಗಿ ಕಾಯ್ದಿರಿಸಲಾಗಿದ್ದರೂ ಸಹ ಈ ಪೈಕಿ 0–35 ಗುಂಟೆ ಬಿ–ಖರಾಬು ಜಮೀನನ್ನು ಹಂಚಿಕೆ ಮಾಡಲು ಸರ್ಕಾರದವು ಮಂಜೂರಾತಿ ನೀಡಿರುವುದರಿಂದ ಕರ್ನಾಟಕ ಭೂಕಂದಾಯ ಕಾಯ್ದೆ 1964 ರ ಕಲಂ 68(1)ರನ್ವಯ ಸದರಿ ಸರ್ಕಾರಿ ಬಿ–ಖರಾಬು ಜಮೀನಿಗೆ ಸರ್ಕಾರದ ಪೂರ್ವಾನುಮೋದನೆ ಅವಶ್ಯಕತೆ ಇರುತ್ತದೆ ಎಂದು ತಿಳಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 513 ಎಲ್.ಜಿ.ಬಿ. 2013, ಬೆಂಗಳೂರು, ದಿನಾಂಕ : 02–01–2014.**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಭೀಮನಕುಪ್ಪೆ ಗ್ರಾಮದ ಸ.ನಂ. 180ರಲ್ಲಿ 0.35 ಗುಂಟೆ ಬಿ–ಖರಾಬು ಜಮೀನನ್ನು ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಕಲಂ 68(1) ಹಾಗೂ ಕಲಂ 68(5) ರನ್ವಯ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸುವ ಕ್ರಿಯೆಗೆ ವಿನಾಯಿತಿ ನೀಡಿ ಇನ್‌ಸ್ಟಿಟ್ಯೂಟ್ ಫಾರ್ ಹ್ಯೂಮನ್ ಸೆಟ್ಲ್‌ಮೆಂಟ್ ಟ್ರಸ್ಟ್‌ನ ಮದರ್ ಕ್ಯಾಂಪಸ್ ಸ್ಥಾಪಿಸುವ ಸಲುವಾಗಿ ಸರ್ಕಾರಿ ಆದೇಶ ಸಂಖ್ಯೆ : ನಅಇ 513 ಬೆಂಭೂಸ್ವಾ 2009, ದಿನಾಂಕ : 18–01–2013ರಲ್ಲಿ ವಿಧಿಸಿದ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂಜೂರಾತಿ–1).

P.R. 121
SC - 100

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಒಂದು ನೂರಕ್ಕೂ ಹೆಚ್ಚಿನ ಸಂಖ್ಯಾಬಲ ಹೊಂದಿರುವ ವಿದ್ಯಾರ್ಥಿ ನಿಲಯಗಳನ್ನು, ಸಂಖ್ಯಾಬಲ 100ಕ್ಕೆ ಸಮನಾಗಿರುವಂತೆ ವಿಭಜಿಸುವ ಹಾಗೂ 100 ಕ್ಕೂ ಕಡಿಮೆ ಸಂಖ್ಯಾಬಲ ಹೊಂದಿರುವ ವಿದ್ಯಾರ್ಥಿ ನಿಲಯಗಳಲ್ಲಿನ ಸಂಖ್ಯಾಬಲವನ್ನು 100 ಕ್ಕೆ ಹೆಚ್ಚಿಸುವ ಕುರಿತು

**ಓದಲಾಗಿದೆ :** ಆಯುಕ್ತರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಸಂ.ಹಿಂವಕನಿ/ವನಿಶಾ–2/ಸಿಆರ್.70/2013–14 ದಿನಾಂಕ:10.09.2013

**ಪ್ರಸ್ತಾವನೆ.**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ, 319 ಮಹಿಳೆಯರ ಮತ್ತು 316 ಪುರುಷರ ಹೀಗೆ ಒಟ್ಟು 635 ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಲಾಗಿದೆ. ಇವುಗಳಲ್ಲಿ ಅನುಕ್ರಮವಾಗಿ 36868 ಮಹಿಳೆಯರ ಮತ್ತು 38026 ಪುರುಷರ ಸಂಖ್ಯಾಬಲವನ್ನು ನಿಗದಿಪಡಿಸಲಾಗಿದೆ. ಈ ಹಿಂದೆ ಪ್ರತಿ 100 ಸಂಖ್ಯಾಬಲಕ್ಕೆ ಒಂದು ವಿದ್ಯಾರ್ಥಿನಿಲಯದಂತೆ ಮಂಜೂರಾತಿಯನ್ನು ನೀಡಲಾಗುತ್ತಿತ್ತು. ಆದರೆ,

ವಿದ್ಯಾರ್ಥಿನಿಲಯಗಳ ಪ್ರವೇಶಕ್ಕಾಗಿ ಪ್ರತಿ ವರ್ಷ ಅತೀ ಹೆಚ್ಚಿನ ಬೇಡಿಕೆ ಬರುತ್ತಿದ್ದ ಕಾರಣ, ಕೆಲವೇ ವಿದ್ಯಾರ್ಥಿನಿಲಯಗಳನ್ನು ಹೊಸದಾಗಿ ಮಂಜೂರು ಮಾಡಲಾಗುತ್ತಿದ್ದು, ಬಹಳಷ್ಟು ವಿದ್ಯಾರ್ಥಿನಿಲಯಗಳಲ್ಲಿ ಇದ್ದ ಸಂಖ್ಯಾಬಲವನ್ನು ಹೆಚ್ಚಿಸಿಕೊಂಡು ಬರಲಾಗುತ್ತಿದೆ.

ಈ ರೀತಿ ಸಂಖ್ಯಾಬಲವನ್ನು ಹೆಚ್ಚಿಸಿಕೊಂಡು ಬರಲಾಗುತ್ತಿದ್ದರೂ ಸಹ, **ಸರ್ಕಾರದ ಆದೇಶ ಸಂಖ್ಯೆ ಪಿಎಸ್‌ಡಬ್ಲ್ಯೂ 71 ಎಸ್ ಇಡಬ್ಲ್ಯೂ 68 ದಿನಾಂಕ:22/07/1968** ರ ಪ್ರಕಾರ ಹೆಚ್ಚುವರಿ ಸಂಖ್ಯಾಬಲಕ್ಕೆ ಅನುಗುಣವಾಗಿ ಹುದ್ದೆಗಳನ್ನು ಮಂಜೂರು ಮಾಡಲಾಗಿರುವುದಿಲ್ಲ. ಈ ಕಾರಣದಿಂದ, ಬಹಳಷ್ಟು ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳಲ್ಲಿ 100 ರಿಂದ 450 ರವರೆಗೆ ಸಂಖ್ಯಾಬಲವನ್ನು ಮಂಜೂರು ಮಾಡಲಾಗಿದ್ದು, ಹೆಚ್ಚುವರಿ ಸಂಖ್ಯಾಬಲಕ್ಕೆ ಅನುಗುಣವಾಗಿ ಸಿಬ್ಬಂದಿ ಮಂಜೂರಾತಿ ನೀಡದ ಕಾರಣ, ವಿದ್ಯಾರ್ಥಿಗಳಿಗೆ ಸಕಾಲದಲ್ಲಿ ಮೆನು ಚಾರ್ಟ್ ಪ್ರಕಾರ ಊಟ, ಉಪಹಾರದ ವ್ಯವಸ್ಥೆಯನ್ನು ಮಾಡಲು ಸಾಧ್ಯವಾಗಿರುವುದಿಲ್ಲ. ಇದರಿಂದ, ವಿದ್ಯಾರ್ಥಿಗಳಿಗೆ ಅನೇಕ ರೀತಿಗಳಿಂದ ತೊಂದರೆಗಳಾಗುತ್ತಿವೆ.

ಈ ಕಾರಣದಿಂದ ದಿನಾಂಕ:12.07.2013 ರಂದು ಮಂಡಿಸಿದ ಆಯವ್ಯಯ ಭಾಷಣದಲ್ಲಿ **"ಒಂದು ನೂರಕ್ಕೂ ಹೆಚ್ಚಿನ ಸಂಖ್ಯಾಬಲ ಹೊಂದಿರುವ ವಿದ್ಯಾರ್ಥಿನಿಲಯಗಳನ್ನು, ಸಂಖ್ಯಾಬಲ 100ಕ್ಕೆ ಸಮನಾಗಿರುವಂತೆ ವಿಭಜಿಸಲಾಗುವುದು. 100ಕ್ಕೂ ಕಡಿಮೆ ಸಂಖ್ಯಾಬಲ ಹೊಂದಿರುವ ವಿದ್ಯಾರ್ಥಿನಿಲಯಗಳಲ್ಲಿನ ಸಂಖ್ಯಾಬಲವನ್ನು 100ಕ್ಕೆ ಹೆಚ್ಚಿಸಲಾಗುವುದು"** ಎಂದು ಘೋಷಣೆ ಮಾಡಲಾಗಿದೆ.

1. 100ಕ್ಕಿಂತ ಕಡಿಮೆ ಸಂಖ್ಯಾಬಲವಿರುವ ಒಟ್ಟು 116 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಿದ್ದು, ಈ ವಿದ್ಯಾರ್ಥಿ ನಿಲಯಗಳನ್ನು 100 ರ ಸಂಖ್ಯಾಬಲಕ್ಕೆ ಸಮಾನಾಂತರವಾಗಿ ಹೆಚ್ಚಿಸಲು ಹೆಚ್ಚುವರಿಯಾಗಿ 4225 ವಿದ್ಯಾರ್ಥಿಗಳ ಸಂಖ್ಯಾಬಲವನ್ನು ನಿಗದಿಪಡಿಸಬೇಕಾಗಿದೆ. ಈ ವಿದ್ಯಾರ್ಥಿ ನಿಲಯಗಳಿಗೆ ಹೆಚ್ಚುವರಿಯಾಗಿ 111 ಅಡುಗೆಯವರು, 104 ಅಡುಗೆ ಸಹಾಯಕರು ಮತ್ತು 6 ರಾತ್ರಿ ಕಾವಲುಗಾರರ ಹುದ್ದೆಗಳನ್ನು ಸೃಜಿಸುವ ಅಗತ್ಯ ಇದೆ.
2. 100ಕ್ಕಿಂತ ಹೆಚ್ಚು ಸಂಖ್ಯಾಬಲವಿರುವ ಒಟ್ಟು 120 ವಿದ್ಯಾರ್ಥಿನಿಲಯಗಳನ್ನು 120+122= 242 ವಿದ್ಯಾರ್ಥಿ ನಿಲಯಗಳನ್ನಾಗಿ ವಿಭಜಿಸಬೇಕಾಗಿದ್ದು, 100 ಸಂಖ್ಯಾಬಲಕ್ಕೆ ಸರಿಸಮಗೊಳಿಸಲು ಹೆಚ್ಚುವರಿಯಾಗಿ 721 ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಮಂಜೂರು ಮಾಡಬೇಕಾಗುತ್ತದೆ. ಈ ವಿದ್ಯಾರ್ಥಿ ನಿಲಯಗಳಿಗೆ ಹೆಚ್ಚುವರಿಯಾಗಿ 122 ನಿಲಯ ಪಾಲಕರು, 428 ಅಡುಗೆಯವರು, 309 ಅಡುಗೆ ಸಹಾಯಕರು ಹಾಗೂ 49 ರಾತ್ರಿ ಕಾವಲುಗಾರರ ಹುದ್ದೆಗಳನ್ನು ಸೃಜಿಸುವ ಅಗತ್ಯ ಇದೆ.
3. ಒಂದು ಸ್ಥಳದಲ್ಲಿ ಒಂದೇ ವಿದ್ಯಾರ್ಥಿ ನಿಲಯ ಇರುವ 99 ವಿದ್ಯಾರ್ಥಿ ನಿಲಯಗಳು ಇದ್ದು ಆ ವಿದ್ಯಾರ್ಥಿ ನಿಲಯದಲ್ಲಿ 100 ರಿಂದ 155ರ ವರೆಗೆ ವಿದ್ಯಾರ್ಥಿಗಳ ಸಂಖ್ಯಾಬಲ ಇದ್ದಲ್ಲಿ ಅ ವಿದ್ಯಾರ್ಥಿ ನಿಲಯಗಳ ಸಂಖ್ಯಾಬಲವನ್ನು ಯಥಾವತ್ತಾಗಿ ಹಾಗೆಯೇ ಉಳಿಸಿಕೊಳ್ಳಬೇಕಾಗುತ್ತದೆ. ಈ ವಿದ್ಯಾರ್ಥಿ ನಿಲಯಗಳಿಗೆ ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಹೆಚ್ಚಿಸುವ ಅಗತ್ಯ ಇರುವುದಿಲ್ಲ. ಆದರೆ ಈ ವಿದ್ಯಾರ್ಥಿ ನಿಲಯಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯಾಬಲಕ್ಕೆ ಅನುಗುಣವಾಗಿ 106 ಅಡುಗೆಯವರು, 68 ಅಡುಗೆ ಸಹಾಯಕರ ಹುದ್ದೆಗಳನ್ನು ಸೃಜಿಸುವ ಅಗತ್ಯ ಇದೆ.

– ಎಂಬುದರ ಬಗ್ಗೆ ಆಯುಕ್ತರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಮೇಲಿನ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಒಟ್ಟು 4946 ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಹೆಚ್ಚಿಸಲು ಹಾಗೂ 1303 ಹುದ್ದೆಗಳನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಬಿಸಿಡಬ್ಲ್ಯೂ 483 ಬಿಎಂಎಸ್ 2013 ಬೆಂಗಳೂರು, ದಿನಾಂಕ : 23.10.2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ 100ಕ್ಕಿಂತ ಕಡಿಮೆ ಸಂಖ್ಯಾಬಲವಿರುವ ಒಟ್ಟು 116 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಿದ್ದು, ಈ ವಿದ್ಯಾರ್ಥಿ ನಿಲಯಗಳನ್ನು 100 ರ ಸಂಖ್ಯಾಬಲಕ್ಕೆ ಸಮಾನಾಂತರವಾಗಿ ಹೆಚ್ಚಿಸಿ ಹೆಚ್ಚುವರಿಯಾಗಿ 4225 ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಮಂಜೂರು ಮಾಡಲಾಗಿದೆ. ಈ ವಿದ್ಯಾರ್ಥಿ ನಿಲಯಗಳಿಗೆ 111 ಅಡುಗೆಯವರು, 104 ಅಡುಗೆ ಸಹಾಯಕರು ಮತ್ತು 6 ರಾತ್ರಿ ಕಾವಲುಗಾರರ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ. ವಿವರಗಳನ್ನು **ಅನುಬಂಧ–1ಎ** ಮತ್ತು **ಅನುಬಂದ–1ಬಿ** ರಲ್ಲಿ ನೀಡಲಾಗಿದೆ.

100ಕ್ಕಿಂತ ಹೆಚ್ಚು ಸಂಖ್ಯಾಬಲವಿರುವ ಒಟ್ಟು 120 ವಿದ್ಯಾರ್ಥಿನಿಲಯಗಳನ್ನು 242 ವಿದ್ಯಾರ್ಥಿ ನಿಲಯಗಳನ್ನಾಗಿ ವಿಭಜಿಸಿ, 100 ಸಂಖ್ಯಾಬಲಕ್ಕೆ ಸರಿಸಮಗೊಳಿಸಲು ಹೆಚ್ಚುವರಿಯಾಗಿ 721 ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಮಂಜೂರು ಮಾಡಲಾಗಿದೆ. ಈ ವಿದ್ಯಾರ್ಥಿ ನಿಲಯಗಳಿಗೆ ಹೆಚ್ಚುವರಿಯಾಗಿ 122 ನಿಲಯ ಪಾಲಕರು, 428 ಅಡುಗೆಯವರು, 309 ಅಡುಗೆ ಸಹಾಯಕರು ಹಾಗೂ 49 ರಾತ್ರಿ ಕಾವಲುಗಾರರ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ. ವಿವರಗಳನ್ನು **ಅನುಬಂಧ–2ಎ** ಮತ್ತು **ಅನುಬಂಧ–2ಬಿ** ರಲ್ಲಿ ನೀಡಲಾಗಿದೆ.

ಒಂದು ಸ್ಥಳದಲ್ಲಿ ಒಂದೇ ವಿದ್ಯಾರ್ಥಿ ನಿಲಯ ಇರುವ 99 ವಿದ್ಯಾರ್ಥಿ ನಿಲಯಗಳಿಗೆ ಆ ವಿದ್ಯಾರ್ಥಿ ನಿಲಯಗಳಲ್ಲಿ ವಿದ್ಯಾರ್ಥಿಗಳ ಸಂಖ್ಯಾಬಲಕ್ಕೆ ಅನುಗುಣವಾಗಿ, 106 ಅಡುಗೆಯವರು, 68 ಅಡುಗೆ ಸಹಾಯಕರ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ. ವಿವರಗಳನ್ನು **ಅನುಬಂಧ–3ಎ** ಮತ್ತು **ಅನುಬಂಧ–3ಬಿ** ರಲ್ಲಿ ನೀಡಲಾಗಿದೆ.

ಈ ಮೇಲಿನಂತೆ ವಿದ್ಯಾರ್ಥಿಗಳ ಸಂಖ್ಯೆಯ ಹೆಚ್ಚಳದಿಂದ ಹಾಗೂ ಹುದ್ದೆಗಳ ಸೃಜನೆಯಿಂದ ತಗಲುವ ವೆಚ್ಚವನ್ನು ಜಿಲ್ಲಾವಲಯ ಯೋಜನೆ ಮತ್ತು ಯೋಜನೇತರ ಲೆಕ್ಕ ಶೀರ್ಷಿಕೆ 2225–00–103–0–26 ರಡಿ "ವಿದ್ಯಾರ್ಥಿ ನಿಲಯಗಳ ನಿರ್ವಹಣೆ" ಕಾರ್ಯಕ್ರಮದಡಿ ಒದಗಿಸಲಾಗುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯು ಅನಧಿಕೃತ ಟಿಪ್ಪಣಿ ಸಂ.ಪಿಡಿ 483 ವೆಚ್ಚ–3/2013ಐಎಂಎಂ 2013, ದಿನಾಂಕ 28.08.2013ರಲ್ಲಿ ನೀಡಿರುವ ಮತ್ತು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂ.ಆಇ 604 ವೆಚ್ಚ–3/13, ದಿನಾಂಕ 31.8.2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ**
ಸರ್ಕಾರದ ಉಪ ಕಾರ್ಯದರ್ಶಿ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

<u>ಅನುಬಂಧ–1ಎ</u>

## ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**100ಕ್ಕಿಂತ ಕಡಿಮೆ ಸಂಖ್ಯಾಬಲ ಹೊಂದಿರುವ ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳನ್ನು 100ಕ್ಕೆ ಸಮನಾಂತರವಾಗಿ ಹೆಚ್ಚಿಸಿರುವ ವಿವರ(ಮಹಿಳೆ)**

**ಸರ್ಕಾರದ ಆದೇಶ ಸಂಖ್ಯೆ ಬಿಸಿಡಬ್ಲ್ಯೂ 483 ಬಿಎಂಎಸ್ 2013 ದಿನಾಂಕ:23.10.2013 ಕ್ಕೆ ಅನುಬಂಧ**

| ಕ್ರಸಂ | ಜಿಲ್ಲೆ | ತಾಲ್ಲೂಕು | ವಿ.ನಿ ಕ್ರಸ | ಸ್ಥಳ | ಮೆಟ್ರಿಕ್ ನಂತರದ ಕೋಡ್ | ಮೂಲ ಮಂಜೂರಾತಿ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಸಂಖ್ಯಾಬಲ | ವಿದ್ಯಾರ್ಥಿ ನಿಲಯದ ಒಟ್ಟು ಮಂಜೂರಾತಿ ಸಂಖ್ಯಾಬಲ | ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆಗನುಗುಣವಾಗಿ ಮಂಜೂರಾಗ ಬೇಕಾಗಿದ್ದ ಹುದ್ದೆಗಳ ಸಂಖ್ಯೆ | | | | ಈ ಹಿಂದೆ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | | ಮಂಜೂರಾತಿ ಸಂಖ್ಯೆ ಅನುಗುಣವಾಗಿ ಈಗ ಹೊದಾಗಿ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | ವಾರ್ಡನ್ | ಅಡುಗೆಯವರು | ಅ.ಸ | ಕಾವಲುಗಾರರು | ವಾರ್ಡನ್ | ಅಡುಗೆಯವರು | ಅ.ಸ | ಕಾವಲುಗಾರರು | ವಾರ್ಡನ್ | ಅಡುಗೆಯವರು | ಅ.ಸ | ಕಾವಲುಗಾರರು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 |
| 1 | ಬಾಗಲಕೋಟೆ | ಬಾದಾಮಿ | 1 | ಬಾದಾಮಿ –D | W | 75 | 25 | 100 | 1 | 3 | 2 | 1 | 1 | 3 | 2 | 1 | 0 | 0 | 0 | 0 |
| | | | | | W | 75 | 25 | 100 | 1 | 3 | 2 | 1 | 1 | 3 | 2 | 1 | 0 | 0 | 0 | 0 |
| 2 | ಬೆಳಗಾಂ | ಚಿಕ್ಕೋಡಿ | 3 | ನಿಪ್ಪಾಣಿ | W | 70 | 30 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಚಿಕ್ಕೋಡಿ | 4 | ಚಿಕ್ಕೋಡಿ ಟೌನ್ (ವೃತ್ತಿಪರ) | W | 70 | 30 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ರಾಯಭಾಗ್ | 5 | ರಾಯಭಾಗ್ ಟೌನ್ | W | 70 | 30 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 3 | ಬೆಂಗಳೂರು ನಗರ | ಬೆಂಗಳೂರು (ಪೂರ್ವ) | 6 | ಬೆಂಗಳೂರು ನಗರ ಸ್ನಾತಕೋತ್ತರ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಬೆಂಗಳೂರು (ಪೂರ್ವ) | 7 | ಕೆ.ಆರ್.ಪುರ | W | 70 | 30 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಬೆಂಗಳೂರು (ಉತ್ತರ) | 8 | ಯಲಹಂಕ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಬೆಂಗಳೂರು (ಉತ್ತರ) | 9 | ಬೆಂಗಳೂರು ನಗರ ವೃತ್ತಿಪರ | W | 80 | 20 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 4 | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | 10 | ದೇವನಹಳ್ಳಿ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ದೊಡ್ಡ ಬಳ್ಳಾಪುರ | 11 | ದೊಡ್ಡ ಬಳ್ಳಾಪುರ | W | 85 | 15 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 5 | ಬಳ್ಳಾರಿ | ಕೂಡ್ಲಿಗಿ | 12 | ಹೊಸಳ್ಳಿ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 6 | ಬಿಜಾಪುರ | ಬಿಜಾಪುರ | 13 | ಬಿಜಾಪುರ ಟೌನ್ (ವೃತ್ತಿಪರ) | W | 60 | 40 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಮುದ್ದೇಬಿಹಾಳ | 14 | ಮುದ್ದೇಬಿಹಾಳ ಪಟ್ಟಣ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 7 | ಮಂಡ್ಯ | ಮಂಡ್ಯ | 15 | ಕೆರಗೋಡು | W | 50 | 50 | 100 | 1 | 3 | 2 | 1 | 1 | 2 | 1 | 0 | 0 | 1 | 1 | 1 |
| | | ಟಿ.ನರಸೀಪುರ | 16 | ಟಿ.ನರಸೀಪುರ ಟೌನ್ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 8 | ಯಾದಗಿರಿ | ಯಾದಗಿರಿ | 17 | ಯಾದಗಿರಿ ಟೌನ್ | W | 90 | 10 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 9 | ಚಿಕ್ಕಮಗಳೂರು | ಕಡೂರು | 18 | ದೇವನೂರು | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 10 | ರಾಮನಗರ | ಮಾಗಡಿ | 19 | ಕುದೂರು | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಕನಕಪುರ | 20 | ಕನಕಪುರ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ವಿ.ನಿ ಕ್ರ.ಸ | ಸ್ಥಳ | ಮೆಟ್ರಿಕ್ ನಂತರದ ಕೋಡ್ | ಮೂಲ ಮಂಜೂರಾತಿ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಸಂಖ್ಯಾಬಲ | ವಿದ್ಯಾರ್ಥಿ ನಿಲಯದ ಒಟ್ಟು ಮಂಜೂರಾತಿ ಸಂಖ್ಯಾಬಲ | ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆಗನುಗುಣವಾಗಿ ಮಂಜೂರಾಗ ಬೇಕಾಗಿದ್ದ ಹುದ್ದೆಗಳ ಸಂಖ್ಯೆ | | | | ಈ ಹಿಂದೆ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | | ಮಂಜೂರಾತಿ ಸಂಖ್ಯೆ ಅನುಗುಣವಾಗಿ ಈಗ ಹೊದಾಗಿ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 |
| 11 | ರಾಯಚೂರು | ಲಿಂಗಸಗೂರು | 21 | ಲಿಂಗಸಗೂರು-D | W | 75 | 25 | 100 | 1 | 3 | 2 | 1 | 1 | 3 | 2 | 1 | 0 | 0 | 0 | 0 |
| 12 | ಉಡುಪಿ | ಉಡುಪಿ | 22 | ಗೋಳಿಯಂಗಡಿ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಕುಂದಾಪುರ | 23 | ಕೋಟೇಶ್ವರ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 13 | ಉತ್ತರ ಕನ್ನಡ | ಶಿರಸಿ | 24 | ಶಿರಸಿ ಟೌನ್ | W | 70 | 30 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಮುಂಡಗೋಡ | 25 | ಮುಂಡಗೋಡ ಟೌನ್ | W | 50 | 50 | 100 | 1 | 3 | 2 | 1 | 1 | 2 | 1 | 0 | 0 | 1 | 1 | 1 |
| | | ಹಳಿಯಾಳ | 26 | ಹಳಿಯಾಳ | W | 60 | 40 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಹೊನ್ನಾವರ | 27 | ಹೊನ್ನಾವರ | W | 70 | 30 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಕುಮಟ | 28 | ಕುಮಟ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಕಾರವಾರ | 29 | ಕಾರವಾರ | W | 90 | 10 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 14 | ಹಾಸನ | ಸಕಲೇಶಪುರ | 30 | ಸಕಲೇಶಪುರ ಟೌನ್ | W | 95 | 5 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಅರಕಲಗೂಡು ಟೌನ್ | 31 | ಅರಕಲಗೂಡು ಟೌನ್ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಹಾಸನ | 32 | ಸಾಲಿಗಾಮೆ | W | 50 | 50 | 100 | 1 | 3 | 2 | 1 | 1 | 2 | 1 | 0 | 0 | 1 | 1 | 1 |
| | | ಹೊಳೆನರಸೀಪುರ | 33 | ಪಡುವಲಹಿಪ್ಪೆ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 15 | ಕೊಪ್ಪಳ | ಯಲಬುರ್ಗಾ | 34 | ಇಟಗಿ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 16 | ಕೋಲಾರ | ಶ್ರೀನಿವಾಸಪುರ | 35 | ಶ್ರೀನಿವಾಸಪುರ | W | 50 | 50 | 100 | 1 | 3 | 2 | 1 | 1 | 2 | 1 | 0 | 0 | 1 | 1 | 1 |
| 17 | ಕೊಡಗು | ವಿರಾಜಪೇಟೆ | 36 | ವಿರಾಜಪೇಟೆ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಮಡಿಕೇರಿ | 37 | ಮಡಿಕೇರಿ | W | 85 | 15 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 18 | ಗುಲ್ಬರ್ಗಾ | ಅಫ್‌ಜಲ್‌ಪುರ | 38 | ಅಫ್‌ಜಲ್‌ಪುರ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಆಳಂದ | 39 | ಆಳಂದ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 19 | ಗದಗ್ | ನರಗುಂದ | 40 | ನರಗುಂದ ಟೌನ್ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಶಿರಹಟ್ಟಿ | 41 | ಲಕ್ಷ್ಮೇಶ್ವರ | W | 75 | 25 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 20 | ಚಾಮರಾಜನಗರ | ಚಾಮರಾಜನಗರ | 42 | ಚಾಮರಾಜನಗರ ಟೌನ್ | W | 70 | 30 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 21 | ದಾವಣಗೆರೆ | ಹರಪನಹಳ್ಳಿ | 43 | ಹರಪನಹಳ್ಳಿ-D | W | 75 | 25 | 100 | 1 | 3 | 2 | 1 | 1 | 3 | 2 | 1 | 0 | 0 | 0 | 0 |
| 22 | ದಕ್ಷಿಣ ಕನ್ನಡ | ಬೆಳ್ತಂಗಡಿ | 44 | ಕೊಕ್ಕಡ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ವಿ.ನಿ ಕ್ರ.ಸ | ಸ್ಥಳ | ಮೆಟ್ರಿಕ್ ನಂತರದ ಕೋಡ್ | ಮೂಲ ಮಂಜೂರಾತಿ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಸಂಖ್ಯಾಬಲ | ವಿದ್ಯಾರ್ಥಿ ನಿಲಯದ ಒಟ್ಟು ಮಂಜೂರಾತಿ ಸಂಖ್ಯಾಬಲ | ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆಗನುಗುಣವಾಗಿ ಮಂಜೂರಾಗ ಬೇಕಾಗಿದ್ದ ಹುದ್ದೆಗಳ ಸಂಖ್ಯೆ | | | | ಈ ಹಿಂದೆ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | | ಮಂಜೂರಾತಿ ಸಂಖ್ಯೆ ಅನುಗುಣವಾಗಿ ಈಗ ಹೊದಾಗಿ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 |
| | | ಸುಳ್ಯ | 45 | ಸುಬ್ರಹ್ಮಣ್ಯ | W | 50 | 50 | 100 | 1 | 3 | 2 | 1 | 1 | 2 | 0 | 0 | 0 | 1 | 2 | 1 |
| | | ಪುತ್ತೂರು | 46 | ನರಿಮೊಗರು | W | 90 | 10 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಪುತ್ತೂರು | 47 | ಪುತ್ತೂರು ಟೌನ್ | W | 60 | 40 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಪುತ್ತೂರು | 48 | ಉಪ್ಪಿನಂಗಡಿ –C | W | 60 | 40 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಬಂಟ್ವಾಳ | 49 | ವಿಟ್ಲ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಬಂಟ್ವಾಳ | 50 | ಬಂಟ್ವಾಳ (ಬಿ.ಸಿ.ರೋಡು) | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| 23 | ಧಾರವಾಡ | ನವಲಗುಂದ | 51 | ನವಲಗುಂದ | W | 50 | 50 | 100 | 1 | 3 | 2 | 1 | 1 | 2 | 1 | 0 | 0 | 1 | 1 | 1 |
| | | ಕುಂದಗೋಳ | 52 | ಕುಂದಗೋಳ | W | 50 | 50 | 100 | 1 | 3 | 2 | 1 | 1 | 2 | 1 | 1 | 0 | 1 | 1 | 0 |
| | | ಧಾರವಾಡ | 53 | ಧಾರವಾಡ (ವೃತ್ತಿಪರ)–D | W | 75 | 25 | 100 | 1 | 3 | 2 | 1 | 1 | 3 | 2 | 1 | 0 | 0 | 0 | 0 |
| | | ಧಾರವಾಡ | 54 | ಧಾರವಾಡ –D | W | 75 | 25 | 100 | 1 | 3 | 2 | 1 | 1 | 3 | 2 | 1 | 0 | 0 | 0 | 0 |
| | | | | ಒಟ್ಟು | | 3570 | 1830 | 5400 | 54 | 162 | 108 | 54 | 54 | 114 | 59 | 48 | 0 | 48 | 49 | 6 |

ಅನುಬಂಧ–1ಬಿ

## ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

## 100ಕ್ಕಿಂತ ಕಡಿಮೆ ಸಂಖ್ಯಾಬಲ ಹೊಂದಿರುವ ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳನ್ನು 100ಕ್ಕೆ ಸಮನಾಂತರವಾಗಿ ಹೆಚ್ಚಿಸಿರುವ ವಿವರ(ಪುರುಷ)

**ಸರ್ಕಾರದ ಆದೇಶ ಸಂಖ್ಯೆ ಬಿಸಿಡಬ್ಲ್ಯೂ 483 ಬಿಎಂಎಸ್ 2013 ದಿನಾಂಕ:23.10.2013 ಕ್ಕೆ ಅನುಬಂಧ**

| ಕ್ರಸಂ | ಜಿಲ್ಲೆ | ತಾಲ್ಲೂಕು | ವಿ.ನಿ ಕ್ರಸ | ಸ್ಥಳ | ಮೆಟ್ರಿಕ್ ನಂತರದ ಕೋಡ್ | ಮೂಲ ಮಂಜೂರಾತಿ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಸಂಖ್ಯಾಬಲ | ವಿದ್ಯಾರ್ಥಿ ನಿಲಯದ ಒಟ್ಟು ಮಂಜೂರಾತಿ ಸಂಖ್ಯಾಬಲ | ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆಗನುಗುಣವಾಗಿ ಮಂಜೂರಾಗ ಬೇಕಾಗಿದ್ದ ಹುದ್ದೆಗಳ ಸಂಖ್ಯೆ | | | | ಈ ಹಿಂದೆ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | | ಮಂಜೂರಾತಿ ಸಂಖ್ಯೆ ಅನುಗುಣವಾಗಿ ಈಗ ಹೊದಾಗಿ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 |
| 1 | ಬಾಗಲಕೋಟೆ | ಮುಧೋಳ | 1 | ಯಡಹಳ್ಳಿ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 2 | ಬೆಳಗಾಂ | ಬೆಳಗಾಂ | 2 | ಬೆಳಗಾಂ (ಕಸಬುರ್ಗಿ)–D | M | 75 | 25 | 100 | 1 | 3 | 2 | 0 | 1 | 3 | 2 | 0 | 0 | 0 | 0 | 0 |
| | | ಬೆಳಗಾಂ | 3 | ಬೆಳಗಾಂ (ವೃತ್ತಪರ)–D | M | 75 | 25 | 100 | 1 | 3 | 2 | 0 | 1 | 3 | 2 | 0 | 0 | 0 | 0 | 0 |
| | | ಸೌಂದತ್ತಿ | 4 | ಸೌಂದತ್ತಿ | M | 50 | 50 | 100 | 1 | 3 | 2 | 0 | 1 | 1 | 1 | 0 | 0 | 2 | 1 | 0 |
| | | ಸೌಂದತ್ತಿ | 5 | ಮುರಗೊಡು | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಹುಕ್ಕೇರಿ | 6 | ಸಂಕೇಶ್ವರ | M | 90 | 10 | 100 | 1 | 3 | 2 | 0 | 1 | 2 | 2 | 0 | 0 | 1 | 0 | 0 |
| | | ಗೋಕಾಕ್ | 7 | ಮರಡಿಮಠ | M | 60 | 40 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಗೋಕಾಕ್ | 8 | ಗೋಕಾಕ್–D | M | 75 | 25 | 100 | 1 | 3 | 2 | 0 | 1 | 3 | 2 | 0 | 0 | 0 | 0 | 0 |
| 3 | ಬೆಂಗಳೂರು ನಗರ | ಬೆಂಗಳೂರು (ಪೂರ್ವ) | 9 | ವಿಜಯನಗರ (ವೈಟ್ ಫೀಲ್ಡ್) –C | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಬೆಂಗಳೂರು (ಉತ್ತರ) | 10 | ಸುಂಕದಕಟ್ಟೆ | M | 80 | 20 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಬೆಂಗಳೂರು (ಉತ್ತರ) | 11 | ಹೆಬ್ಬಾಳ –ದಿನ್ನೂರು ಮುಖ್ಯ ರಸ್ತೆ | M | 80 | 20 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಬೆಂಗಳೂರು (ಉತ್ತರ) | 12 | ರಾಜಾಜಿನಗರ (ಅನುಭವನಗರ) | M | 80 | 20 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಬೆಂಗಳೂರು (ದಕ್ಷಿಣ) | 13 | ದೇವಸಂದ್ರ –C | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 4 | ಬಳ್ಳಾರಿ | ಸಿರಗುಪ್ಪ | 14 | ತೆಕ್ಕಲಕೋಟೆ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಹೊಸಪೇಟೆ | 15 | ಹೊಸಪೇಟೆ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 5 | ಬೀದರ್ | ಬೀದರ್ | 16 | ಬೀದರ್ (ವೃತ್ತಿಪರ)–D | M | 75 | 25 | 100 | 1 | 3 | 2 | 0 | 1 | 3 | 2 | 0 | 0 | 0 | 0 | 0 |
| 6 | ಬಿಜಾಪುರ | ಬಸವನಬಾಗೇವಾಡಿ | 17 | ಬಸವನಬಾಗೇವಾಡಿ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಬಸವನಬಾಗೇವಾಡಿ | 18 | ಕೂಡಗಿ | M | 90 | 10 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 7 | ಶಿವಮೊಗ್ಗ | ಭದ್ರಾವತಿ | 19 | ಹೊಳೇಹೊನ್ನೂರು | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಸಾಗರ | 20 | ಬರೂರು | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 8 | ಮಂಡ್ಯ | ಶ್ರೀರಂಗಪಟ್ಟಣ | 21 | ಶ್ರೀರಂಗಪಟ್ಟಣ ಟೌನ್ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ವಿ.ನಿ ಕ್ರ.ಸ | ಸ್ಥಳ | ಮೆಟ್ರಿಕ್ ನಂತರದ ಕೋಡ್ | ಮೂಲ ಮಂಜೂರಾತಿ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಸಂಖ್ಯಾಬಲ | ವಿದ್ಯಾರ್ಥಿ ನಿಲಯದ ಒಟ್ಟು ಮಂಜೂರಾತಿ ಸಂಖ್ಯಾಬಲ | ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆಗನುಗುಣವಾಗಿ ಮಂಜೂರಾಗ ಬೇಕಾಗಿದ್ದ ಹುದ್ದೆಗಳ ಸಂಖ್ಯೆ | | | | ಈ ಹಿಂದೆ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | | ಮಂಜೂರಾತಿ ಸಂಖ್ಯೆ ಅನುಗುಣವಾಗಿ ಈಗ ಹೊದಾಗಿ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 |
| | | ಮಳವಳ್ಳಿ | 22 | ಮಳವಳ್ಳಿ ಟೌನ್ | M | 95 | 5 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಮಳವಳ್ಳಿ | 23 | ಕಿರುಗಾವಲು | M | 80 | 20 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಮಂಡ್ಯ | 24 | ಮಂಡ್ಯ–ತೂಬಿನಕೆರೆ (ಸ್ನಾತಕೋತ್ತರ) | M | 70 | 30 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 9 | ಮೈಸೂರು | ನಂಜನಗೂಡು | 25 | ಕಳಲೆ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಮೈಸೂರು | 26 | ಇಲವಾಲ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಕೆ.ಆರ್.ನಗರ | 27 | ಸಾಲಿಗ್ರಾಮ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 10 | ಯಾದಗಿರಿ | ಸುರಪುರ | 28 | ಸುರಪುರ ಟೌನ್ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಸುರಪುರ | 29 | ಹುಣಸಗಿ | M | 50 | 50 | 100 | 1 | 3 | 2 | 0 | 1 | 1 | 1 | 0 | 0 | 2 | 1 | 0 |
| 11 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 30 | ಚಿಕ್ಕಬಳ್ಳಾಪುರ | M | 50 | 50 | 100 | 1 | 3 | 2 | 0 | 1 | 1 | 1 | 0 | 0 | 2 | 1 | 0 |
| 12 | ಚಿಕ್ಕಮಗಳೂರು | ಕಡೂರು | 31 | ಪಂಚನಹಳ್ಳಿ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಕಡೂರು | 32 | ಯಗಟಿ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 13 | ರಾಮನಗರ | ಮಾಗಡಿ | 33 | ಮಾಗಡಿ ಟೌನ್ | M | 60 | 40 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಕನಕಪುರ | 34 | ಕನಕಪುರ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಚನ್ನಪಟ್ಟಣ | 35 | ಚನ್ನಪಟ್ಟಣ ಟೌನ್ (ವೃತ್ತಿಪರ) | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 14 | ರಾಯಚೂರು | ಮಾನ್ವಿ | 36 | ಮಾನ್ವಿ | M | 50 | 50 | 100 | 1 | 3 | 2 | 0 | 1 | 1 | 1 | 0 | 0 | 2 | 1 | 0 |
| | | ದೇವದುರ್ಗ | 37 | ದೇವದುರ್ಗ | M | 50 | 50 | 100 | 1 | 3 | 2 | 0 | 1 | 1 | 1 | 0 | 0 | 2 | 1 | 0 |
| 15 | ಉಡುಪಿ | ಉಡುಪಿ | 38 | ಹಿರಿಯಾಡ್ಕ | M | 60 | 40 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಉಡುಪಿ | 39 | ಶಿರ್ವ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಉಡುಪಿ | 40 | ಕಾಪು | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 16 | ಉತ್ತರ ಕನ್ನಡ | ಸಿದ್ದಾಪುರ | 41 | ಸಿದ್ದಾಪುರ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ವಿ.ನಿ ಕ್ರ.ಸ | ಸ್ಥಳ | ಮೆಟ್ರಿಕ್ ನಂತರದ ಕೋಡ್ | ಮೂಲ ಮಂಜೂರಾತಿ ಸಂಖ್ಯೆ | ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಸಂಖ್ಯಾಬಲ | ವಿದ್ಯಾರ್ಥಿ ನಿಲಯದ ಒಟ್ಟು ಮಂಜೂರಾತಿ ಸಂಖ್ಯಾಬಲ | ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆಗನುಗುಣವಾಗಿ ಮಂಜೂರಾಗ ಬೇಕಾಗಿದ್ದ ಹುದ್ದೆಗಳ ಸಂಖ್ಯೆ | | | | ಈ ಹಿಂದೆ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | | ಮಂಜೂರಾತಿ ಸಂಖ್ಯೆ ಅನುಗುಣವಾಗಿ ಈಗ ಹೊದಾಗಿ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು | ನಿ ಪಾಲಕರು | ಅಡುಗೆ ಯವರು | ಅ.ಸ. | ರಾತ್ರಿ ಕಾವಲು ಗಾರರು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 |
| | | ಕಾರವಾರ | 42 | ಉಳಗ–C | **M** | **50** | **50** | **100** | 1 | 3 | 2 | 0 | 1 | 1 | 1 | 0 | 0 | 2 | 1 | 0 |
| | | ಕಾರವಾರ | 43 | ಕಾರವಾರ–D | **M** | **75** | **25** | **100** | 1 | 3 | 2 | 0 | 1 | 3 | 2 | 0 | 0 | 0 | 0 | 0 |
| 17 | ಹಾಸನ | ಹಾಸನ | 44 | ಮೊಸಳೆಹೊಸಹಳ್ಳಿ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಹೊಳೆನರಸೀಪುರ | 45 | ಹೊಳೆನರಸೀಪುರ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಹೊಳೇನರಸೀಪುರ | 46 | ದೊಡ್ಡಕಾಡನೂರು | M | 50 | **50** | **100** | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಚನ್ನರಾಯಪಟ್ಟಣ | 47 | ಹಿರಿಸಾವೆ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 18 | ಕೋಲಾರ | ಶ್ರೀನಿವಾಸಪುರ | 48 | ಶ್ರೀನಿವಾಸಪುರ | M | 50 | 50 | 100 | 1 | 3 | 2 | 0 | 1 | 1 | 1 | 0 | 0 | 2 | 1 | 0 |
| | | ಮುಳಬಾಗಿಲು | 49 | ಮುಳಬಾಗಿಲು | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಮಾಲೂರು | 50 | ಮಾಲೂರು | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 19 | ಕೊಡಗು | ವಿರಾಜಪೇಟೆ | 51 | ಗೋಣಿಕೊಪ್ಪ | M | 60 | 40 | 100 | 1 | 3 | 2 | 0 | 1 | 2 | 1 | 1 | 0 | 1 | 1 | 0 |
| | | ಮಡಿಕೇರಿ | 52 | ಬಾಗಮಂಡಲ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಮಡಿಕೇರಿ | 53 | ಮಡಿಕೇರಿ ಟೌನ್ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಮಡಿಕೇರಿ | 54 | ಮಡಿಕೇರಿ ಟೌನ್ | M | 60 | 40 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 20 | ಗುಲ್ಬರ್ಗಾ | ಚಿಂಚೋಳಿ | 55 | ಚಿಂಚೋಳಿ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಚಿತ್ತಾಪುರ | 56 | ಹೆಬ್ಬಾಳ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 21 | ತುಮಕೂರು | ತುಮಕೂರು | 57 | ತುಮಕೂರು–C | **M** | **50** | **50** | **100** | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 22 | ಚಾಮರಾಜನಗರ | ಗುಂಡ್ಲುಪೇಟೆ | 58 | ಗುಂಡ್ಲುಪೇಟೆ | M | 75 | 25 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 23 | ದಕಿಣ ಕನ್ನಡ | ಪುತ್ತೂರು | 59 | ಪುತ್ತೂರು ಟೌನ್ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಪುತ್ತೂರು | 60 | ಬೀರುಮಲೆ | M | 50 | 50 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| | | ಮಂಗಳೂರು | 61 | ಉಳ್ಳಾಲ | M | 40 | 60 | 100 | 1 | 3 | 2 | 0 | 1 | 2 | 1 | 0 | 0 | 1 | 1 | 0 |
| 24 | ಧಾರವಾಡ | ಹುಬ್ಬಳ್ಳಿ | 62 | ಹುಬ್ಬಳ್ಳಿ(ಈಶ್ವರ ನಗರ) –D | **M** | **75** | **25** | **100** | 1 | 3 | 2 | 0 | 1 | 3 | 2 | 0 | 0 | 0 | 0 | 0 |
| | | | | ಒಟ್ಟು | | **3805** | **2395** | **6200** | **62** | **186** | **124** | **0** | **62** | **123** | **69** | **1** | **0** | **63** | **55** | **0** |

ಅನುಬಂಧ–2ಎ

## ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

### 100 ಕ್ಕಿಂತ ಹೆಚ್ಚಿನ ಸಂಖ್ಯಾಬಲ ಹೊಂದಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ವಿಭಜಿಸಿರುವ ವಿವರಗಳು (ಮಹಿಳೆ)

ಸರ್ಕಾರದ ಆದೇಶ ಸಂಖ್ಯೆ ಬಿಸಿಡ್ಲ್ಯೂ 483 ಬಿಎಂಎಸ್ 2013 ದಿನಾಂಕ:23.10.2013 ಕ್ಕೆ ಅನುಬಂಧ

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ಮೂಲ ವಿ.ನಿ. ಕ್ರ.ಸಂ | ಹೊಸ ವಿ.ನಿ. ಕ್ರ.ಸಂ | ವಿದ್ಯಾರ್ಥಿ ನಿಲಯದ ಸ್ಥಳ | ಈ ಹಿಂದೆ ಇದ್ದ ಮಂಜೂರಾತಿ ಸಂಖ್ಯಾಬಲ | ಮೂಲ ವಿದ್ಯಾರ್ಥಿ ನಿಲಯಕ್ಕೆ ಈಗ ನಿಗದಿಪಡಿಸಿದ ಸಂಖ್ಯಾಬಲ | 100 ಕ್ಕೆ ಕೊರತೆ ಬೀಳುವ ಸಂಖ್ಯೆಗೆ ಅನುಗುಣವಾಗಿ ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿರುವ ವಿದ್ಯಾರ್ಥಿಗಳ ಸಂಖ್ಯಾಬಲ | ಹೊಸ ವಿದ್ಯಾರ್ಥಿ ನಿಲಯಗಳಿಗೆ ಈಗ ನಿಗಧಿಪಡಿಸಿರುವ ಸಂಖ್ಯಾಬಲ | ಮೂಲ ವಿ.ನಿ ದಲ್ಲಿ ಹೆಚ್ಚುವರಿಯಾಗಿರುವ ಸಂಖ್ಯಾಬಲ | ಈ ಹಿಂದೆ ಮಂಜೂರಾಗಿದ್ದ ಹುದ್ದೆಗಳ ಸಂಖ್ಯೆ | | | | |
|---|---|---|---|---|---|---|---|---|---|---|---|---|---|---|---|
| | | | | | | | | | | | ನಿಲಯ ಪಾಲಕರು | ಅಡುಗೆಯವರು | ಅಡುಗೆ ಸಹಾಯಕರು | ರಾತ್ರಿ ಕಾವಲುಗಾರರು | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
| 1 | ಚಿಕ್ಕಬಳ್ಳಾಪುರ | ಚಿಂತಾಮಣಿ | 1 | | ಚಿಂತಾಮಣಿ | 200 | 100 | | | 100 | 1 | 3 | 2 | 1 | 7 |
| | | ಚಿಂತಾಮಣಿ | | 1 | ಚಿಂತಾಮಣಿ(ಎ) | | | | 100 | | | | | | |
| | | ಗೌರಿಬಿದನೂರು | 2 | | ಗೌರಿಬಿದನೂರು | 175 | 100 | | | 75 | 1 | 3 | 2 | 1 | 7 |
| | | ಗೌರಿಬಿದನೂರು | | 2 | ಗೌರಿಬಿದನೂರು (ಎ) | | | 25 | 100 | | | | | | |
| 2 | ಚಿಕ್ಕಮಗಳೂರು | ಚಿಕ್ಕಮಗಳೂರು | 3 | | ಚಿಕ್ಕಮಗಳೂರು | 300 | 100 | | | 200 | 1 | 2 | 1 | 1 | 5 |
| | | ಚಿಕ್ಕಮಗಳೂರು | | 3 | ಚಿಕ್ಕಮಗಳೂರು (ಎ) | | | | 100 | | | | | | |
| | | ಚಿಕ್ಕಮಗಳೂರು | | 4 | ಚಿಕ್ಕಮಗಳೂರು (ಎ) | | | | 100 | | | | | | |
| | | ಚಿಕ್ಕಮಗಳೂರು | 4 | | ಚಿಕ್ಕಮಗಳೂರು (ವೃತ್ತಿಪರ) | 200 | 100 | | | 100 | 1 | 3 | 2 | 1 | 7 |
| | | ಚಿಕ್ಕಮಗಳೂರು | | 5 | ಚಿಕ್ಕಮಗಳೂರು (ವೃತ್ತಿಪರ)(ಎ) | | | | 100 | | | | | | |
| | | ಚಿಕ್ಕಮಗಳೂರು | 5 | | ಚಿಕ್ಕಮಗಳೂರು (ವೃತ್ತಿಪರ) | 173 | 100 | | | 73 | 1 | 2 | 1 | 1 | 5 |
| | | ಚಿಕ್ಕಮಗಳೂರು | | 6 | ಚಿಕ್ಕಮಗಳೂರು (ವೃತ್ತಿಪರ)(ಎ) | | | 27 | 100 | | | | | | |
| | | ಕಡೂರು | 6 | | ಕಡೂರು | 225 | 100 | | | 125 | 1 | 2 | 1 | 1 | 5 |
| | | ಕಡೂರು | | 7 | ಕಡೂರು (ಎ) | | | | 100 | | | | | | |
| | | ಕಡೂರು | 7 | | ಕಡೂರು | 150 | 100 | | | 50 | 1 | 3 | 2 | 1 | 7 |
| | | ಕಡೂರು | | 8 | ಕಡೂರು (ಎ) | | | 25 | 100 | | | | | | |
| | | ಶೃಂಗೇರಿ | 8 | | ಶೃಂಗೇರಿ | 175 | 100 | | | 75 | 1 | 2 | 1 | 1 | 5 |
| | | ಶೃಂಗೇರಿ | | 9 | ಶೃಂಗೇರಿ (ಎ) | | | 25 | 100 | | | | | | |
| 3 | ಚಿತ್ರದುರ್ಗ | ಚಿತ್ರದುರ್ಗ | 9 | | ಚಿತ್ರದುರ್ಗ (ವೃತ್ತಿಪರ) | 150 | 100 | | | 50 | 1 | 3 | 2 | 1 | 7 |
| | | ಚಿತ್ರದುರ್ಗ | **10** | | ಚಿತ್ರದುರ್ಗ | **125** | **100** | | | 25 | 1 | 3 | 2 | 1 | 7 |
| | | ಚಿತ್ರದುರ್ಗ | 11 | | ಚಿತ್ರದುರ್ಗ | 125 | 100 | | | 25 | 1 | 3 | 2 | 1 | 7 |
| | | ಚಿತ್ರದುರ್ಗ | | 10 | ಚಿತ್ರದುರ್ಗ (ವೃತ್ತಿಪರ)(ಎ) | | | | 100 | | | | | | |
| 4 | ದಾವಣಗೆರೆ | ದಾವಣಗೆರೆ | 12 | | ದಾವಣಗೆರೆ | 180 | 100 | | | 80 | 1 | 3 | 1 | 1 | 6 |
| | | ದಾವಣಗೆರೆ | | 11 | ದಾವಣಗೆರೆ(ಎ) | | | 20 | 100 | | | | | | |
| 5 | ದಕ್ಷಿಣ ಕನ್ನಡ | ಬೆಳ್ತಂಗಡಿ | 13 | | ಬೆಳ್ತಂಗಡಿ | 175 | 125 | | | 50 | 1 | 3 | 2 | 1 | 7 |
| | | ಬೆಳ್ತಂಗಡಿ | 14 | | ಬೆಳ್ತಂಗಡಿ | 150 | 100 | | | 50 | 1 | 3 | 2 | 1 | 7 |
| | | ಬೆಳ್ತಂಗಡಿ | | 12 | ಬೆಳ್ತಂಗಡಿ (ಎ) | | | | 100 | | | | | | |
| | | ಬೆಳ್ತಂಗಡಿ | 15 | | ಉಜಿರೆ | 200 | 100 | | | 100 | 1 | 2 | 2 | 1 | 6 |
| | | ಬೆಳ್ತಂಗಡಿ | | 13 | ಉಜಿರೆ(ಎ) | | | | 100 | | | | | | |
| | | ಮಂಗಳೂರು | 16 | | ಮಂಗಳೂರು (ಚೀಲಿಂಬಿ) | 150 | 100 | | | 50 | 1 | 2 | 1 | 1 | 5 |
| | | ಮಂಗಳೂರು | 17 | | ಮಂಗಳೂರು (ವೃತ್ತಿಪರ) | 125 | 100 | | | 25 | 1 | 3 | 2 | 1 | 7 |
| | | ಮಂಗಳೂರು | 18 | | ಮಂಗಳೂರು ವಿಶ್ವವಿದ್ಯಾಲಯ | 125 | 100 | | | 25 | 1 | 2 | 1 | 1 | 5 |
| | | ಮಂಗಳೂರು | | 14 | ಮಂಗಳೂರು (ಚೀಲಿಂಬಿ)(ಎ) | | | | 100 | | | | | | |
| | | ಸುಳ್ಯ | 19 | | ಸುಳ್ಯ | 175 | 100 | | | 75 | 1 | 2 | 1 | 1 | 5 |
| | | ಸುಳ್ಯ | | 15 | ಸುಳ್ಯ(ಎ) | | | 25 | 100 | | | | | | |
| 6 | ಧಾರವಾಡ | ಧಾರವಾಡ | 20 | | ಕರ್ನಾಟಕ ವಿಶ್ವವಿದ್ಯಾಲಯ | 150 | 125 | | | 25 | 1 | 2 | 1 | 1 | 5 |
| | | ಹುಬ್ಬಳ್ಳಿ | 21 | | ಹುಬ್ಬಳ್ಳಿ (ವೃತ್ತಿಪರ) | 150 | 125 | | | 25 | 1 | 2 | 1 | 1 | 5 |
| | | ಹುಬ್ಬಳ್ಳಿ | 22 | | ಹುಬ್ಬಳ್ಳಿ (ಸಾಯಿನಗರ) | 150 | 100 | | | 50 | 1 | 2 | 1 | 1 | 5 |
| | | ಹುಬ್ಬಳ್ಳಿ | | 16 | ಹುಬ್ಬಳ್ಳಿ (ವೃತ್ತಿಪರ)(ಎ) | | | | 100 | | | | | | |

